KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ನವೆಂಬರ್ ೧೬, ೨೦೦೬ (ಕಾರ್ತಿಕ ೨೫, ಶಕ ವರ್ಷ ೧೯೨೮) | ಸಂಚಿಕೆ ೪೫ |
| --- | --- | --- |

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕಂದಾಯ ಇಲಾಖೆಯ ಬರ ಉಸ್ತುವಾರಿ ಕೋಶದ ವಿಶೇಷಾಧಿಕಾರಿ ಹುದ್ದೆಗೆ ಹೊಂದಿಕೊಂಡಂತೆ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 382 ಟಿಎನ್‌ಆರ್ 2002 ದಿನಾಂಕ: 3.1.2003.

2. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 408 ಸಅಸೇ 2005 ದಿನಾಂಕ: 7.7.2006.

3. ಕಡತ ಸಂಖ್ಯೆ: ಆರ್‌ಡಿ 286 ಟಿಎನ್‌ಆರ್ 2006.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಕ್ರಮ ಸಂಖ್ಯೆ (!)ರಲ್ಲಿನ ದಿನಾಂಕ: 3.1.2003ರ ಆದೇಶದಲ್ಲಿ ಕಂದಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ನೇತೃತ್ವದಲ್ಲಿ ಕಂದಾಯ ವಿಭಾಗದಲ್ಲಿನ ಬರ ಪರಿಸ್ಥಿತಿಯನ್ನು ಅವಲೋಕಿಸಲು ಬರ ಉಸ್ತುವಾರಿ ಕೋಶವನ್ನು ದಿನಾಂಕ: 1.2.2002 ರಿಂದ ಜಾರಿಗೆ ಬರುವಂತೆ ಕಂದಾಯ ಇಲಾಖೆಯೇ ಸೃಜಿಸಿ ವಿವಿಧ ಆದೇಶಗಳ ಮುಖಾಂತರ ಮುಂದುವರೆಸಿಕೊಂಡು ಬಂದಿರುತ್ತದೆ.

ಮೇಲೆ ಓದಲಾಗಿರುವ ಕ್ರಮ ಸಂಖ್ಯೆ (2)ರ ಅಧಿಸೂಚನೆಯಲ್ಲಿ ಬರ ಉಸ್ತುವಾರಿ ಕೋಶಕ್ಕೆ ಕರ್ನಾಟಕ ಸರ್ಕಾರ ಸಚಿವಾಲಯದ ಅಧಿಕಾರಿಯವರನ್ನು ನೇಮಿಸಲಾಗಿದೆ.

ಮೇಲೆ ಓದಲಾಗಿರುವ ಕ್ರಮ ಸಂಖ್ಯೆ (3)ರ ಕಡತದಲ್ಲಿ ಬರ ಉಸ್ತುವಾರಿ ಕೋಶದಲ್ಲಿನ ವಿಶೇಷಾಧಿಕಾರಿ ಹುದ್ದೆಗೆ ಹೊಂದಿಕೊಂಡಂತೆ ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸೃಜಿಸುವಂತೆ ಪ್ರಸ್ತಾವನೆ ಇದೆ.

| | |
| --- | --- |
| 1. ಶೀಘ್ರಲಿಪಿಗಾರರು | 1 ಹುದ್ದೆ |
| 2. ಕಿರಿಯ ಸಹಾಯಕ | 1 ಹುದ್ದೆ |
| 3. ದಲಾಯತ್ | 1 ಹುದ್ದೆ |

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 65 ಸಸಿವಿ 2006, ಬೆಂಗಳೂರು, ದಿನಾಂಕ: 19ನೇ ಸೆಪ್ಟೆಂಬರ್ 2006**

ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯಲ್ಲಿ ಬರ ಉಸ್ತುವಾರಿ ಕೋಶದ ವಿಶೇಷಾಧಿಕಾರಿ ಹುದ್ದೆಗೆ ಹೊಂದಿಕೊಂಡಂತೆ ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸೃಜಿಸಲಾಗಿದೆ.

| | |
| --- | --- |
| 1. ಶೀಘ್ರಲಿಪಿಗಾರರು | 1 ಹುದ್ದೆ |
| 2. ಕಿರಿಯ ಸಹಾಯಕ | 1 ಹುದ್ದೆ |
| 3. ದಲಾಯತ್ | 1 ಹುದ್ದೆ |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1474 ವೆಚ್ಚ-5/2006, ದಿನಾಂಕ: 30.8.2006ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1390

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

## REVENUE SECRETARIAT

**Sub :** Continuation of the Scheme for providing ITI Training to the Children of PDFs under project Seabird in Uttara Kannada Dist.

**Read :**
1) G.O. No. RD 146 REH 98 Dtd: 22-8-1998.
2) Proceedings of SLCC meeting held on 9-12-2005.
3) Lr No. PSB/RHN/CR-47/2005-06 Dt: 5-6-06 from the D.C. Uttara Kannada.
4) Lr No. 5B/8(i)/1053/ITI Dtd: 29-5-2006 from the G.M. (F&K) Project Seabird, New Delhi.

**Preamble:**

In Government Order Dt: 22-8-98 read at sl. no. 1 above, Government has sanctioned a scheme for providing ITI Training Courses for one child from each Project Displaced Family under the project Sea Bird. Under this scheme, a stipend of Rs. 1,000 will be given to each child for a period of 24 months. This scheme was in force for a period of 7 years from the academic session 1998-1999 till 2005.

In the SLCC Meeting held on 9-12-05 it has been decided to continue the Scheme for a further period of 3 years. The General Manager (F&K) project Seabird New Delhi has agreed for continuation of the scheme. However he has mentioned that the project is not in a position to incur further expenditure on this and has suggested that the expenditure may be borne out of funds available with the Deputy Commissioner Karwar, fore rehabilitation.

The Deputy Commissioner, Karwar in his letter read at Sl. No. 4 above has informed that the scheme is being continued at an outlay of Rs. 50.40 lakhs for 3 years pending ratification.

The proposal has been examined in detail and following order is issued.

**Government Order No./RD 226 REH 2005, Bangalore Dt: 6th September 2006.**

Sanction is accorded for continuation of the scheme for providing ITI Training course to the Children of project displaced families under the project Seabird for a further period of three years from 2005-06.

This order is issued in exercise of the financial powers delegated to the Secretaries to Government in Administrative departments vide G.O. No. FD 1 TFP 86 dated 10-7-1986.

By Order and in the name of the Governor of Karnataka,

**M. Venkateshmurthy**

P.R. 1397

Under Secretary to Government,
Revenue Department, (REH),

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಬಿ ಎ ಎಂ ಎಸ್, ಬಿ ಯು ಎಂ ಎಸ್, ಬಿ ಹೆಚ್ ಎಂ ಎಸ್, ಬಿ ಎನ್ ವೈ ಎಸ್ ಕೋರ್ಸಿನ ಪ್ರವೇಶಕ್ಕೆ ನಿಗಧಿಗೊಳಿಸಿದ ಫಿಸಿಕ್ಸ್, ಕೆಮಿಸ್ಟ್ರಿ, ಬಯೋಲಜಿ ವಿಷಯಗಳ ಕನಿಷ್ಠ ಅಂಕಗಳನ್ನು ಹಿಂದುಳಿದ ವರ್ಗದ ಅಭ್ಯರ್ಥಿಗಳಿಗೆ ಶೇ. 40ನ್ನು ನಿಗಧಿಗೊಳಿಸುವ ಬಗ್ಗೆ.

**ಓದಲಾಗಿದೆ:** 1) ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ, ಬೆಂಗಳೂರು ಇವರ ಪತ್ರ ಸಂಖ್ಯೆ: ಭಾವೈಪ 47 ಅಭಿವೃದ್ಧಿ (2) 2006-07, ದಿನಾಂಕ: 18.8.2006.
2) ಸರ್ಕಾರದ ಆದೇಶ ಸಂಖ್ಯೆ: ಆಕುಕ 189 ಪಿಟಿಡಿ 2006, ದಿನಾಂಕ: 24.6.2006.

**ಪ್ರಸ್ತಾವನೆ:**

ಮೇಲೆ ಕ್ರ.ಸಂ. (1) ರಲ್ಲಿ ಓದಲಾದ ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯ ನಿರ್ದೇಶಕರ ಪತ್ರದಲ್ಲಿ ಬಿ ಎ ಎಂ ಎಸ್, ಬಿ ಯು ಎಂ ಎಸ್, ಬಿ ಹೆಚ್ ಎಂ ಎಸ್, ಬಿ ಎನ್ ವೈ ಎಸ್ ಕೋರ್ಸುಗಳ ಪ್ರವೇಶಕ್ಕೆ ಸೀಟ್ ಮ್ಯಾಟ್ರಿಕ್ಸ್‌ನ್ನು ಮೇಲೆ ಕ್ರ.ಸಂ. (2) ರಲ್ಲಿ ಓದಲಾದ ಆದೇಶದಲ್ಲಿ ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್. 251. ಬಿಎಲ್ಎ. 94, ದಿನಾಂಕ: 31.1.95 ರಲ್ಲಿ ನಿಗಧಿಗೊಳಿಸಿದಂತೆ, ಪರಿಶಿಷ್ಟ ಜಾತಿ ಹಾಗೂ ಇತರೆ ಹಿಂದುಳಿದ ಪಂಗಡಗಳ ಅಭ್ಯರ್ಥಿಗಳಿಗೆ ಸೀಟುಗಳನ್ನು ಹಂಚಿಕೆ ಮಾಡಿದ್ದು, ಹಾಲಿ ಸದರಿ ಕೋರ್ಸುಗಳ ಪ್ರವೇಶ ತಡೆಯಲು ಪ್ರೀಯೂನಿವರ್ಸಿಟಿ ಕೋರ್ಸಿನಲ್ಲಿ ಐಚ್ಛಿಕ ವಿಷಯಗಳಾದ ಭೌತಶಾಸ್ತ್ರ, ರಸಾಯನ ಶಾಸ್ತ್ರ ಮತ್ತು ಬಯೋಲಜಿ ವಿಷಯಗಳಲ್ಲಿ ಪರಿಶಿಷ್ಟ ಪಂಗಡ ಮತ್ತು ಪರಿಶಿಷ್ಟ ಜಾತಿ ಅಭ್ಯರ್ಥಿಗಳಿಗೆ ಕನಿಷ್ಠ ಶೇ. 40ರ ಅಂಕ ಪಡೆದ ಅಭ್ಯರ್ಥಿಗಳಿಗೆ ಅವಕಾಶ ಕಲ್ಪಿಸಲಾಗಿದೆ.

ಮೇಲೆ ರೀತಿ ಹಿಂದುಳಿದ ಪಂಗಡಗಳಾದ ಕ್ಯಾಟಗರಿ 1, 2ಎ, 2ಬಿ, 3ಎ, 3ಬಿ ನಲ್ಲಿ ಬರುವ ಅಭ್ಯರ್ಥಿಗಳಿಗೂ ಸಹ ಐಚ್ಛಿಕ ವಿಷಯಗಳಲ್ಲಿ ಕನಿಷ್ಠ 40 ರಷ್ಟು ಅಂಕ ಪಡೆದ ಅಭ್ಯರ್ಥಿಗಳಿಗೂ ಸದರಿ ಕೋರ್ಸಿನ ಪ್ರವೇಶಕ್ಕೆ ಅವಕಾಶ ಕಲ್ಪಿಸಲಾಗಿರುವುದರಿಂದ ಕರ್ನಾಟಕ ಸೆಲೆಕ್ಷನ್ ಆಫ್ ಕ್ಯಾಂಡಿಡೇಟ್ಸ್ ಫಾರ್ ಅಡ್ಮಿಷನ್ ಟು ಪ್ರೊಫೇಷನಲ್ ಇನ್ಸ್‌ಟ್ಯೂಷನ್ಸ್ ರೂಲ್ಸ್ 2006ರ ನಿಯಮ 11 ರನ್ವಯ ಬಿ ಎ ಎಂ ಎಸ್, ಬಿ ಯು ಎಂ ಎಸ್, ಬಿ ಹೆಚ್ ಎಂ ಎಸ್ ಕೋರ್ಸಿನ ಪ್ರವೇಶಕ್ಕೆ ದ್ವಿತೀಯ ಪಿಯುಸಿಯಲ್ಲಿನ ಐಚ್ಛಿಕ ವಿಷಯಗಳಿಗೂ ಶೇ. 40 ರಷ್ಟು ಅಂಕ ಪಡೆದ ಹಿಂದುಳಿದ ಪಂಗಡಗಳಾದ ಕ್ಯಾಟಗರಿ 1, 2ಎ, 2ಬಿ, 3ಎ ಮತ್ತು 3ಬಿ ಅಭ್ಯರ್ಥಿಗಳಿಗೆ ಅವಕಾಶ ಕಲ್ಪಿಸಿದ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸರ್ಕಾವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 189 ಪಿಟಿಡಿ 2006, ಬೆಂಗಳೂರು, ದಿನಾಂಕ: 11ನೇ ಸೆಪ್ಟೆಂಬರ್ 2006.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ಸೆಲಕ್ಷನ್ ಆಫ್ ಕ್ಯಾಂಡಿಡೇಟ್ಸ್ ಫಾರ್ ಅಡ್‌ಮಿಷನ್ ಟು ಪ್ರೊಫೇಷನಲ್ ಇನ್ಸ್‌ಟಿಟ್ಯೂಷನ್ಸ್ ರೂಲ್ 2006ರ ನಿಯಮ 11 ರನ್ವಯ ಬಿ ಎ ಎಂ ಎಸ್, ಬಿ ಯು ಎಂ ಎಸ್, ಬಿ ಹೆಚ್ ಎಂ ಎಸ್ ಕೋರ್ಸಿನ ಪ್ರವೇಶಕ್ಕೆ

ದ್ವಿತೀಯ ಪಿಯುಸಿ ಯಲ್ಲಿನ ಐಚ್ಛಿಕ ವಿಷಯಗಳಿಗೂ ಶೇಕಡ 40 ಅಂಕ ಪಡೆದ ಹಿಂದುಳಿದ ಪಂಗಡಗಳಾದ ಕ್ಯಾಟಗರಿ 1, 2ಎ, 2ಬಿ, 3ಎ ಮತ್ತು 3ಬಿ ಅಭ್ಯರ್ಥಿಗಳಿಗೆ ಸದರಿ ಕೋರ್ಸಿನ ಪ್ರವೇಶ ಪಡೆಲಯ ಅವಕಾಶ ಕಲ್ಪಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1402

**ಎಸ್.ಎನ್. ಕೃಷ್ಣಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ವಿಷಯ:** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಖಾಲಿ ಇರುವ 250 ವೈದ್ಯಾಧಿಕಾರಿಗಳ ಹುದ್ದೆಗಳನ್ನು ನೇರ ನೇಮಕಾತಿಯಿಂದ ಭರ್ತಿ ಮಾಡಲು ಅರ್ಜಿ ಹಾಗೂ ಸೇವಾ ಶುಲ್ಕ ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರ ಅಧಿಸೂಚನೆ ಸಂಖ್ಯೆ: ಆಕುಕ 862 ಹೆಚ್ಎಸ್ಹೆಚ್ 2004 ದಿನಾಂಕ: 11/05/2006.

2) ನಿರ್ದೇಶಕರು, ಆಕುಕ ಸೇವೆಗಳು ಇವರ ಪತ್ರ ಸಂಖ್ಯೆ: ಎಸ್ಆರ್ ಸಿ 190/ 2005-06 ದಿನಾಂಕ: 03.08.06.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಅಧಿಸೂಚನೆಯಲ್ಲಿ ವಿವರಿಸಿರುವಂತೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಖಾಲಿ ಇರುವ 250 (ಮೊದಲನೇ ಹಂತದಲ್ಲಿ) ವೈದ್ಯಾಧಿಕಾರಿ ಹುದ್ದೆಗಳನ್ನು ವಿಶೇಷ ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ನಿಯಮಗಳನ್ನು ಅಂತಿಮಗೊಳಿಸಲಾಗಿದೆ. ಆದರಂತೆ ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಅರ್ಜಿ ಹಾಗೂ ಸೇವಾ ಶುಲ್ಕ ನಿಗದಿಪಡಿಸುವ ಬಗ್ಗೆ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಕೋರಿರುವಂತೆ ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 862 ಹೆಚ್ಎಸ್ಹೆಚ್ 2004, ಬೆಂಗಳೂರು, ದಿನಾಂಕ: 11ನೇ ಸೆಪ್ಟೆಂಬರ್ 2006.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಖಾಲಿ ಇರುವ 250 (ಮೊದಲನೇ ಹಂತದಲ್ಲಿ) ವೈದ್ಯಾಧಿಕಾರಿ ಹುದ್ದೆಗಳನ್ನು ವಿಶೇಷ ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಬಗ್ಗೆ ಅರ್ಜಿ ನಮೂನೆ ಒಂದಕ್ಕೆ ರೂ. 50-00 ರಂತೆ ಹಾಗೂ ಪ್ರತಿ ಅರ್ಜಿಯ ಜೊತೆಗೆ ಸೇವಾ ಶುಲ್ಕ ರೂ. 200-00ಗಳ ಡಿಮ್ಯಾಂಡ್ ಡ್ರಾಫ್ಟ್ (ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ / ಪ್ರವರ್ಗ-1 ಅಭ್ಯರ್ಥಿಗಳಿಗೆ ಸೇವಾ ಶುಲ್ಕದಿಂದ ಮಾತ್ರ ವಿನಾಯ್ತಿ ನೀಡಲಾಗಿದೆ) ಮೂಲಕ ನಿಗದಿಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1403

**ಟಿ.ಎನ್. ನಾರಾಯಣಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**HEALTH & FAMILY WELFARE SECRETARIAT**

**Sub :** Purchase of Imported IOLs for Usage of patients at Minto Ophthalmic Hospital, Bangalore - sanction reg.

**Read :** Letter No. RIO/PS/49/06-07, dt 03-05-2006 of the Superintendent, Minto Hospital, Bangalore.

**Preamble:**

1. In the letter read at above the Superintendent, Minto Ophthalmic Hospital, Bangalore has stated that Minto Ophthalmic Hospital is procuring Intracular Lens (Indian) for Cataract Surgery Patients. Few IOLs (Indian) are supplied under NPCB Programme. Many patients of Minto Ophthalmic Hospital are also asking for imported IOLs including foldable lens and can afford to buy the same under a reasonable cost. For those patients who wants to undergo imported IOLs foldable lens, the hospital can collect user's charges as per Government norms.

2. In this regard, he requested the Government to give permission to procure imported IOLs under pruchase rules and also to give permission to collect user's charges for Cataract Surgery from those patients who prefer imported IOLs. The proposal has been examined and ordered accordingly.

**Government Order No. HFW 156 MSF 2006, Bangalore, Dated: 1st July 2006.**

3. Government are pleased to accord permission for purchase of Imported IOLs for usage of patients at Minto Ophthalmic Hospital, Bangalore under Purchase Rules. The Superintendent Minto Ophthalmic Hospital Bangalore is also permitted to collect user's charges for Cataract Surgery from those patients who prefer imported IOLs.

4. All purchase procedures and norms will have to be followed and the Superintendent of Minto Ophthalmic Hospital shall be responsible for observing the norms and maintenance of accounts.

By Order and in the name of the Governor of Karnataka,

**D.B. GANACHARI**

P.R. 1404

Under Secretary to Government,

Health & Family Welfare Department (Medical Education).

## ವಸತಿ ಸಚಿವಾಲಯ

**ವಿಷಯ:** ರಾಯಚೂರು ಜಿಲ್ಲೆ ಸಿಂಧನೂರು ತಾಲ್ಲೂಕು ಸಿಂಧನೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂ. ವಇ / 42 / ಹೆಚ್‌ಎಎಂ / 1998, ದಿನಾಂಕ: 10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ರಾಯಚೂರು ಜಿಲ್ಲೆ ಸಿಂಧನೂರು ತಾಲ್ಲೂಕು ಸಿಂಧನೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ / 63 / ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ: 15ನೇ ಸೆಪ್ಟೆಂಬರ್ 2006**

ಮೇಲ್ಕಂಡ ಸಂದರ್ಭದಲ್ಲಿ ರಾಯಚೂರು ಜಿಲ್ಲೆ ಸಿಂಧನೂರು ತಾಲ್ಲೂಕು ಸಿಂಧನೂರು ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀ ಜಯಾನಂದಯ್ಯ ಸ್ವಾಮಿ ತಂದೆ ನಾಗಯ್ಯ ವಕೀಲರು, ಸಿಂಧನೂರು — ಸದಸ್ಯರು
2. ಶ್ರೀ ಹೆಚ್. ಲಿಂಗರಾಜ್ ತಂದೆ ಈರಪ್ಪ, ಗೋರೆಬಾಳ — ಸದಸ್ಯರು
3. ಶ್ರೀಮತಿ ಹಸೀನಾ ಗಂಡ ಅಜಮೀರಪ್ಪ, ಬಡಿಬೇಸ, ಸಿಂಧನೂರು — ಸದಸ್ಯರು
4. ಶ್ರೀ ಗಿರೀಶ ವಕೀಲರು ತಂದೆ ಗುಂಡಪ್ಪ — ಸದಸ್ಯರು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1417

**ಹೆಚ್. ಹನುಮಂತಯ್ಯ**

ಪೀಠಾಧಿಕಾರಿ-1, ವಸತಿ ಇಲಾಖೆ.

**ವಿಷಯ:** ಬಾಗಲಕೋಟೆ ಜಿಲ್ಲೆ ಜಮಖಂಡಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂ. ವಇ / 42 / ಹೆಚ್‌ಎಎಂ / 1998, ದಿನಾಂಕ: 10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಬಾಗಲಕೋಟೆ ಜಿಲ್ಲೆ ಜಮಖಂಡಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ / 66 / ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ: 15ನೇ ಸೆಪ್ಟೆಂಬರ್ 2006**

ಮೇಲ್ಕಂಡ ಸಂದರ್ಭದಲ್ಲಿ ಬಾಗಲಕೋಟೆ ಜಿಲ್ಲೆ ಜಮಖಂಡಿ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀ ವಿರುಪಾಕ್ಷ ಬಜಂತ್ರಿ, ಜಮಖಂಡಿ, ಬಾಗಲಕೋಟೆ ಜಿಲ್ಲೆ. — ಸದಸ್ಯರು
2. ಶ್ರೀ ಅಪ್ಪಾಶಿ ಕಲ್ಲಪ್ಪ ಗಡಾದ, ಜಮಖಂಡಿ, ಬಾಗಲಕೋಟೆ ಜಿಲ್ಲೆ. — ಸದಸ್ಯರು
3. ಶ್ರೀ ಪರಮಾನಂದ ಸೋಮಲಿಂಗಪ್ಪ ಚಿಗರಿ, ಜಮಖಂಡಿ, ಬಾಗಲಕೋಟೆ ಜಿಲ್ಲೆ. — ಸದಸ್ಯರು
4. ಶ್ರೀಮತಿ ಸುಪ್ರಭಾ ಮಧ್ವರಾಜ್ ದಂಡಾವತಿ, ಜಮಖಂಡಿ, ಬಾಗಲಕೋಟೆ ಜಿಲ್ಲೆ. — ಸದಸ್ಯರು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1418

**ಹೆಚ್. ಹನುಮಂತಯ್ಯ**

ಪೀಠಾಧಿಕಾರಿ-1, ವಸತಿ ಇಲಾಖೆ.

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ ಮಾಗಡಿ (TMC) ತಾಲ್ಲೂಕಿನ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂ. ವಇ / 42 / ಹೆಚ್‌ಎಎಂ / 1998, ದಿನಾಂಕ: 10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಮಾಗಡಿ (TMC) ತಾಲ್ಲೂಕಿನ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ / 96 / ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್ 2006**

ಮೇಲ್ಕಂಡ ಸಂದರ್ಭದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ ಮಾಗಡಿ (TMC) ತಾಲ್ಲೂಕಿನ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀ ನಾಗರಾಜು, ಸೋಮೇಶ್ವರ ಬಡಾವಣೆ, ಮಾಗಡಿ ಟೌನ್,
   ಬೆಂಗಳೂರು ಗ್ರಾಮಾಂತರ ಜಿಲ್ಲೆ. ಸದಸ್ಯರು
2. ಶ್ರೀ ಪುರುಷೋತ್ತಮ, ಹೊಸಪೇಟೆ, ಮಾಗಡಿ ಟೌನ್,
   ಬೆಂಗಳೂರು ಗ್ರಾಮಾಂತರ ಜಿಲ್ಲೆ ಸದಸ್ಯರು
3. ಶ್ರೀಮತಿ ಭಾಗ್ಯಶ್ರೀ ಕೋಂ. ಶ್ರೀ ಗಂಗರಾಜು, ಕಲ್ಯಾಗೇಟ್, ಮಾಗಡಿ ಟೌನ್,
   ಬೆಂಗಳೂರು ಗ್ರಾಮಾಂತರ ಜಿಲ್ಲೆ. ಸದಸ್ಯರು
4. ಶ್ರೀ ಸೈಯದ್‌ಷಾಮಿಲ್ ಪಾಷ ಊನವಾಬ್, ಹಳೇ ಮಸೀದಿ, ಮೊಹಲ್ಲಾ, ಮಾಗಡಿ ಟೌನ್,
   ಬೆಂಗಳೂರು ಗ್ರಾಮಾಂತರ ಜಿಲ್ಲೆ. ಸದಸ್ಯರು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1419

**ಎಸ್. ಇಂದುಮತಿ**

ಪೀಠಾಧಿಕಾರಿ-2, ವಸತಿ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಕನ್ನಡ ಅಭಿವೃದ್ಧಿ ಪ್ರಾಧಿಕಾರಕ್ಕೆ 2006-07ನೇ ಸಾಲಿನ ಆಯವ್ಯಯ ಮೊಬಲಗಿನ 2 ಕಂತುಗಳನ್ನು ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ:** ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಅವರ ಪತ್ರ ಸಂಖ್ಯೆ: ಕಅಪ : ಕಾ : ಆಯವ್ಯಯ / 10 / 2005-06 ದಿನಾಂಕ: 30.8.2006.

**ಪ್ರಸ್ತಾವನೆ:**

ಕನ್ನಡ ಅಭಿವೃದ್ಧಿ ಪ್ರಾಧಿಕಾರಕ್ಕೆ 2006-07ನೇ ಸಾಲಿನ ಆಯವ್ಯಯದಲ್ಲಿ ಯೋಜನೇತರ ಬಾಬ್ತಿನಲ್ಲಿ ರೂ. 44.88 ಲಕ್ಷಗಳನ್ನು ನಿಗದಿಪಡಿಸಲಾಗಿದೆ. ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ರವರು ಮೇಲೆ ಓದಲಾದ ದಿನಾಂಕ: 30.08.2006ರ ಪತ್ರದಲ್ಲಿ ಪ್ರಾಧಿಕಾರದ ಅಧ್ಯಕ್ಷರ ಆಪ್ತ ಶಾಖೆ ಸಿಬ್ಬಂದಿ, ಇಂಧನ ವೆಚ್ಚ, ಇತರೆ ವೆಚ್ಚಗಳು, ಕಾರ್ಯದರ್ಶಿ ಹಾಗೂ ಕಛೇರಿ ಸಿಬ್ಬಂದಿ ವೆಚ್ಚ, ವಾಹನ ನಿರ್ವಹಣೆಗೆ ಅಗತ್ಯವಾಗಿರುವ ಕಾರಣ ನಿಗದಿಪಡಿಸಿದ ಅನುದಾನದಲ್ಲಿ ಲಭ್ಯವಿರುವ ಕಂತುಗಳನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

### ಆದೇಶ ಸಂಖ್ಯೆ: ಸಂಕಇ 31 ಕೆಓಎಲ್ 2006, ಬೆಂಗಳೂರು, ದಿನಾಂಕ: 28ನೇ ಸೆಪ್ಟೆಂಬರ್ 2006

ಕನ್ನಡ ಅಭಿವೃದ್ಧಿ ಪ್ರಾಧಿಕಾರಕ್ಕೆ 2006-07ನೇ ಸಾಲಿನಲ್ಲಿ ನಿಗದಿಪಡಿಸಿರುವ ಯೋಜನೇತರ ಅನುದಾನ ರೂ. 44.88 ಲಕ್ಷಗಳಲ್ಲಿ 2 ಕಂತು ಮೊತ್ತ ರೂ. 22.44 ಲಕ್ಷಗಳನ್ನು (ರೂಪಾಯಿ ಇಪ್ಪತ್ತೆರಡು ಲಕ್ಷದ ನಲ್ವತ್ತನಾಲ್ಕು ಸಾವಿರಗಳು ಮಾತ್ರ) ಈ ಕೂಡಲೇ ಬಿಡುಗಡೆ ಮಾಡುತ್ತದೆ. ಈ ಸಂಬಂಧಿ ವೆಚ್ಚವನ್ನು 2006-07 ನೇ ಸಾಲಿನ ಯೋಜನೇತರ ಆಯವ್ಯಯ ಲೆಕ್ಕಶೀರ್ಷಿಕೆ 2052-00-092-0-09-101 ಯೋಜನೇತರ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ವಾತಾ ಮತ್ತು ಪ್ರವಾಸೋದ್ಯಮ ಇಲಾಖೆ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ: ಇಡಿ 668 ಐಎಫ್(ಬಿಎ) 2006 ದಿನಾಂಕ: 19.08.2006 ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಶಿವರಾಮ್**

ಪಿ.ಆರ್. 1432

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ).

**ವಿಷಯ:** ಆಯುಕ್ತರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರಿಗೆ ದಿನಾಂಕ: 21.08.2006 ರಿಂದ 23.08.2006 ರವರೆಗೆ ಚೆನ್ನೈ ಪ್ರವಾಸ ಕೈಗೊಳ್ಳಲು ಅನುಮತಿ ನೀಡುವ ಬಗ್ಗೆ.

**ಉಲ್ಲೇಖ:** ಆಯುಕ್ತರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಪತ್ರ ಸಂಖ್ಯೆ: ಕಸನಿ / 1 / ನಿಆಶಾ / 2006-07 ದಿನಾಂಕ: 19.08.2006.

**ಪ್ರಸ್ತಾವನೆ:**

ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು ಅವರ ಮೇಲೆ ಓದಲಾದ ದಿನಾಂಕ: 19.08.2006 ರ ಪತ್ರದಲ್ಲಿ 4ನೇ ವಿಶ್ವ ಕನ್ನಡ ಸಮ್ಮೇಳನಕ್ಕೆ ಪ್ರಾಯೋಜಿಸಲಾದ ಸಾಂಸ್ಕೃತಿಕ ಕಲಾ ತಂಡದ ಸದಸ್ಯರುಗಳಿಗೆ ಅಗತ್ಯವಾದ ವೀಸಾ ಮಾಡಿಸುವ ಸಲುವಾಗಿ ದಿನಾಂಕ: 21.08.2006 ರಿಂದ 23.08.2006 ರವರೆಗೆ ಚೆನ್ನೈ ಪ್ರವಾಸ ಕೈಗೊಳ್ಳಲು ಅನುಮತಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

### ಸರ್ಕಾರದ ಆದೇಶ ಸಂಖ್ಯೆ: ಸಂಕಇ 93 ಕಸನಿ 2006, ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್ 2006

ಪ್ರಸ್ತಾವನೆಯಲ್ಲಿ ಹೇಳಿರುವ ಉದ್ದೇಶಗಳಿಗೆ ದಿನಾಂಕ: 21.08.2006 ರಿಂದ 23.08.2006 ರವರೆಗೆ ಚೆನ್ನೈ ಪ್ರವಾಸ ಕೈಗೊಳ್ಳಲು ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು ಅವರಿಗೆ ಈ ಮೂಲಕ ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಶಿವರಾಮ್**

ಪಿ.ಆರ್. 1433

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ).

**URBAN DEVELOPMENT SECRETARIAT**
**CORRIGENDUM**

**No. UDD 107, AHD 2005, Bangalore, Dated: 13th September 2006.**

In the Government Order No. UDD 98 AHD 2004 dated 30-5-2005 the words appearing in the fourth line of para 2 of the order portion "and Principal Accountant Audit" is deleted.

By Order and in the name of the Governor of Karnataka,
**S.J. SAMPATHKUMAR**
Under Secretary to Government,
Urban Development Department.

P.R. 1449

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:** ಮೆ: ಶ್ರೀರಂಗ ಇಂಡಸ್ಟ್ರೀಸ್ ಇವರಿಗೆ ಮಂಜೂರು ಮಾಡಿರುವ ಕಲ್ಲುಗಣಿಗುತ್ತಿಗೆಯನ್ನು ರದ್ದುಪಡಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಐ 101 ಎಂಎಂಎನ್ 1998, ದಿನಾಂಕ: 13.01.2000.

2) ಆಯುಕ್ತರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಇವರ ಪತ್ರ ಸಂಖ್ಯೆ: ಡಿಎಂಜಿ / ಡಿಡಿ (ಎಂಎ0 / ಸಿಇಸಿ / 2005-06 / 3055, ದಿನಾಂಕ: 16.12.2005.

**ಪ್ರಸ್ತಾವನೆ:**

ಮೆ: ಶ್ರೀರಂಗ ಇಂಡಸ್ಟ್ರೀಸ್ ಇವರಿಗೆ ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು, ಸೇಬಿನಕಟ್ಟೆ ಗ್ರಾಮದ ಸರ್ವೆ ನಂ. 49/1 ರಲ್ಲಿ 40.00 ಎಕರೆ ಪ್ರದೇಶದಲ್ಲಿ ಪಿಂಕ್ ಗ್ರಾನೈಟ್‌ಗಾಗಿ ಕಲ್ಲುಗಣಿಗುತ್ತಿಗೆಯನ್ನು 10 ವರ್ಷಗಳ ಅವಧಿಗೆ ಮೇಲೆ ಓದಲಾದ (1) ದಿನಾಂಕ: 13.01.2000ದ ಅಧಿಸೂಚನೆಯನ್ವಯ ಮಂಜೂರು ಮಾಡಲಾಗಿತ್ತು. ಕೆ.ಎಂ.ಎಂ.ಸಿ. ನಿಯಮಾವಳಿಗಳು 1994 ರ ನಿಯಮ 18(1) ರನ್ವಯ ಕಲ್ಲುಗಣಿಗುತ್ತಿಗೆಯನ್ನು ಮಂಜೂರು ಮಾಡಿದ 3 ತಿಂಗಳ ಅವಧಿಯೊಳಗೆ ಕಲ್ಲುಗಣಿಗುತ್ತಿಗೆಯನ್ನು ಅಮಲ್ಜಾರಿ ಮಾಡಿಕೊಳ್ಳಬೇಕಾಗಿರುತ್ತದೆ. ತಪ್ಪಿದಲ್ಲಿ ಕಲ್ಲುಗಣಿಗುತ್ತಿಗೆಯು ತಾನೇತಾನಾಗಿ ರದ್ದಾದಂತೆ ಭಾವಿಸಲಾಗುವುದು. ಮೆ: ಶ್ರೀರಂಗ ಇಂಡಸ್ಟ್ರೀಸ್ ಇವರಿಗೆ ಮಂಜೂರಾಗಿರುವ ಕಲ್ಲುಗಣಿಗುತ್ತಿಗೆಯನ್ನು ಅಮಲ್ಜಾರಿ ಮಾಡಿ ಕೊಂಡಿರುವುದಿಲ್ಲವೆಂದು ಮೇಲೆ ಓದಲಾದ (2) ರ ಪತ್ರದಲ್ಲಿ ಆಯುಕ್ತರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರು ವರದಿ ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ ಸಂಖ್ಯೆ: ಸಿಐ 105 ಎಂಎಂಎನ್ 2005 (I) ಬೆಂಗಳೂರು, ದಿನಾಂಕ: 27ನೇ ಸೆಪ್ಟೆಂಬರ್ 2006.**

ಮೆ: ಶ್ರೀರಂಗ ಇಂಡಸ್ಟ್ರೀಸ್ ಇವರಿಗೆ ಮಂಜೂರಾಗಿರುವ ಕಲ್ಲುಗಣಿಗುತ್ತಿಗೆಯನ್ನು, ಮಂಜೂರಾಗಿ 6 ವರ್ಷಗಳಾದರೂ ಸಹ ಇನ್ನೂ ಅಮಲ್ಜಾರಿ ಮಾಡಿಕೊಳ್ಳದೇ ಇರುವುದರಿಂದ, ಮೆ: ಶ್ರೀರಂಗ ಇಂಡಸ್ಟ್ರೀಸ್ ಇವರಿಗೆ ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು, ಸೇಬಿನಕಟ್ಟೆ ಗ್ರಾಮದ ಸರ್ವೆ ನಂ. 49/1 ರಲ್ಲಿ 40.00 ಎಕರೆ ಪ್ರದೇಶದಲ್ಲಿ ಪಿಂಕ್ ಗ್ರಾನೈಟ್‌ಗಾಗಿ ಮಂಜೂರು ಮಾಡಲಾಗಿರುವ ಕಲ್ಲುಗಣಿಗುತ್ತಿಗೆಯನ್ನು ಕೆ.ಎಂ.ಎಂ.ಸಿ. ನಿಯಮಾವಳಿಗಳು 1994 ರ ನಿಯಮ 18(1)ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರವು ರದ್ದುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ವಿ. ರಾಮಚಂದ್ರರಾವ್**
ಪೀಠಾಧಿಕಾರಿ (ಗಣಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. 1454

**ಶಿಕ್ಷಣ ಸಚಿವಾಲಯ**

**ವಿಷಯ :** ಕಾಲೇಜು ಶಿಕ್ಷಣ ಇಲಾಖೆಯ ಸೇವೆಯಲ್ಲಿ ಉಪನ್ಯಾಸಕರುಗಳಾಗಿ ವಿಲೀನಗೊಂಡ ಅರೆಕಾಲಿಕ ಉಪನ್ಯಾಸಕರುಗಳಿಗೆ ಎನ್.ಇ.ಟಿ. / ಎಸ್.ಎಲ್.ಇ.ಟಿ. ವಿದ್ಯಾರ್ಹತೆ ಪಡೆಯಲು ಹೆಚ್ಚಿನ ಕಾಲಾವಕಾಶ ನೀಡುವ ಕುರಿತು.

**ಓದಲಾಗಿದೆ :**

1) ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ / 48 / ಎಸ್‌ಆರ್‌ಇ / 96 ದಿನಾಂಕ: 22.01.97.
2) ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ / 55 / ಎಸ್‌ಆರ್‌ಇ / 2001 ದಿನಾಂಕ: 09.07.2002.
3) ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 89 ಡಿಸಿಇ 97 ದಿನಾಂಕ: 26.05.2003 ಮತ್ತು ದಿನಾಂಕ: 23.06.2003
4) ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 142 ಡಿಸಿಇ 2003 ದಿನಾಂಕ: 20.09.2003
5) ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 180 ಡಿಸಿಇ 2003 ದಿನಾಂಕ: 18.10.2003
6) ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 27 ಡಿಸಿಇ 2004 ದಿನಾಂಕ: 26.02.2004
7) ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 142 ಡಿಸಿಇ 2004 ದಿನಾಂಕ: 25.09.2004
8) ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 108 ಡಿಸಿಇ 2005 ದಿನಾಂಕ: 12.07.2005
9) ಕೆ.ಎ.ಟಿ. ಅರ್ಜಿ ಸಂಖ್ಯೆ: 5194 / 5585/ 2005ರಲ್ಲಿ ದಿನಾಂಕ: 13.07.2005 ರಂದು ನೀಡಿರುವ ಮಧ್ಯಂತರ ತಡೆಯಾಜ್ಞೆ
10) ಸರ್ಕಾರಿ ಪತ್ರ ಸಂಖ್ಯೆ: ಇಡಿ 108 ಡಿಸಿಇ 2005 ದಿನಾಂಕ: 26.07.2005.

**ಪ್ರಸ್ತಾವನೆ :**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ: 22.01.97ರಲ್ಲಿ ಕಾಲೇಜು ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿನ ಸರ್ಕಾರಿ ಪದವಿ ಕಾಲೇಜುಗಳಲ್ಲಿ ಅರೆಕಾಲಿಕ ಉಪನ್ಯಾಸಕರ ಸೇವಾ ವಿಲೀನತೆಗೆ ನಿಯಮಗಳನ್ನು ರೂಪಿಸಲಾಗಿತ್ತು. ಎಸ್.ಎಲ್.ಪಿ (ಸಿವಿಲ್) ಸಂಖ್ಯೆ: 15991/97 ರಲ್ಲಿ ಭಾರತ ಸರ್ವೋಚ್ಚ ನ್ಯಾಯಾಲಯ ದಿನಾಂಕ 04.01.2001ರಂದು ನೀಡಿದ ತೀರ್ಪಿನನ್ವಯ ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ದಿನಾಂಕ: 09.07.2002ರಲ್ಲಿ ಜಾರಿಗೆ ತಂದಿರುವ ತಿದ್ದುಪಡಿ ನಿಯಮಗಳನುಸಾರ ಎನ್.ಇ.ಟಿ. / ಎಸ್.ಎಲ್.ಇ.ಟಿ. ಪರೀಕ್ಷೆ ಪಾಸು ಮಾಡದವರು ತಿದ್ದುಪಡಿ ನಿಯಮಗಳನ್ನು ಹೊರಡಿಸಿದ ದಿನಾಂಕದಿಂದ ಅಂದರೆ ದಿನಾಂಕ: 09.07.2002 ರಿಂದ 03 ವರ್ಷದೊಳಗೆ ಎನ್.ಇ.ಟಿ. / ಎಸ್.ಎಲ್.ಇ.ಟಿ. ಪಾಸು ಮಾಡಬೇಕಾಗಿತ್ತು. ಮೇಲೆ ಕ್ರಮಾಂಕ (3) ರಿಂದ (7)ರವರೆವಿಗೆ ಓದಲಾದ ವಿವಿಧ ಅಧಿಸೂಚನೆಗಳ ಮೂಲಕ ಹಲವಾರು ಅರೆಕಾಲಿಕ ಉಪನ್ಯಾಸಕರ ಸೇವೆಯನ್ನು ರಾಜ್ಯ ವೇತನ ಶ್ರೇಣಿಗಳನ್ನು ನೀಡಿ ವಿಲೀನಗೊಳಿಸಲಾಗಿತ್ತು. ಇವರುಗಳು ದಿನಾಂಕ 9.7.2005ರೊಳಗೆ ಎನ್.ಇ.ಟಿ. / ಎಸ್.ಎಲ್.ಇ.ಟಿ.

ಪರೀಕ್ಷೆಯಲ್ಲಿ ಪಾಸು ಮಾಡದಿದ್ದಲ್ಲಿ ಸೇವೆಯಿಂದ ವಜಾಗೊಳಿಸುವ ಷರತ್ತನ್ನು ವಿಧಿಸಲಾಗಿತ್ತು. ಆ ಪ್ರಕಾರ ನಿಗದಿತ ಅವಧಿಯಲ್ಲಿ ಎನ್.ಇ.ಟಿ. / ಎಸ್.ಎಲ್.ಇ.ಟಿ. ಪರೀಕ್ಷೆ ಪಾಸು ಮಾಡದಿರುವ ಅರೆಕಾಲಿಕ ಉಪನ್ಯಾಸಕರನ್ನು ಮೇಲೆ ಕ್ರಮಾಂಕ (8)ರಲ್ಲಿ ಓದಲಾದ ದಿನಾಂಕ: 12.07.2005 ರನ್ವಯ ಸೇವೆಯಿಂದ ತೆಗೆದುಹಾಕಲಾಯಿತು. ಇದರಿಂದ ಬಾದಿತರಾದ ಶ್ರೀ ಶಿವರಾಜ್ ಮತ್ತು ಇತರರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ: 5194-5585/2005 ದಾಖಲಿಸಿ ದಿನಾಂಕ: 13.07.2005 ರಂದು ತಡೆಯಾಜ್ಞೆ ಪಡೆದುಕೊಂಡ ಪ್ರಯುಕ್ತ, ಮೇಲೆ ಕ್ರಮಾಂಕ (10)ರಲ್ಲಿ ಓದಲಾದ ದಿನಾಂಕ: 26.07.2005 ರ ಪತ್ರದ ಮುಖೇನ ಆಡಳಿತ ನ್ಯಾಯ ಮಂಡಳಿಯು ನೀಡುವ ಆದೇಶವನ್ನು ಬಾಕಿ ಇಟ್ಟು ಅವರುಗಳನ್ನು ಪುನಃ ಕರ್ತವ್ಯದಲ್ಲಿ ಮುಂದುವರಿಸುವಂತೆ ನಿರ್ದೇಶನ ನೀಡಲಾಯಿತು. ಆಡಳಿತ ನ್ಯಾಯ ಮಂಡಳಿಯ ತೀರ್ಪು ಇನ್ನೂ ಹೊರಬಿದ್ದಿರುವುದಿಲ್ಲ. ಈ ಮಧ್ಯ ಯು.ಜಿ.ಸಿ.ಯವರು ದಿನಾಂಕ: 14.06.2006 ರಂದು ಹೊರಡಿಸಿರುವ ಆದೇಶದಲ್ಲಿ ಪದವಿ ಹಂತಕ್ಕೆ ಎಂ.ಫಿಲ್ ಇದ್ದಲ್ಲಿ ಇನ್.ಇ.ಟಿ. ಪಾಸು ಮಾಡುವುದರಿಂದ ವಿನಾಯಿತಿ ನೀಡಿ ಆದೇಶಿಸಿದೆ. ಓದಲಾದ ಈ ಸನ್ನಿವೇಶದಲ್ಲಿ ಮಾನ್ಯ ಉನ್ನತ ಶಿಕ್ಷಣ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ: 28.8.2006 ರಂದು ಜ್ಞಾನಜ್ಯೋತಿ ಸಭಾಂಗಣದಲ್ಲಿ ಜರುಗಿದ ಸಭೆಯಲ್ಲಿ ಈ ವಿಷಯವನ್ನು ಸಮಗ್ರವಾಗಿ ಚರ್ಚಿಸಿ ಪರಿಶೀಲಿಸಿದ ನಂತರ ದಿನಾಂಕ: 14.06.2006ರಂದು ಯು.ಜಿ.ಸಿ. ರವರು ಹೊರಿಸಿರುವ ತಿದ್ದುಪಡಿ ಆದೇಶವನ್ನು ಗಮನದಲ್ಲಿಟ್ಟುಕೊಂಡು, ಕೆ.ಎ.ಟಿ. ಅರ್ಜಿ ಸಂಖ್ಯೆ: 5194-5585 / 2005 ರಲ್ಲಿ ಅರ್ಜಿದಾರರಾದ ಶ್ರೀ ಶಿವರಾಜು ಮತ್ತಿತರರಿಗೆ ಸಂಬಂಧಿಸಿದಂತೆ 14.06.2006 ರಿಂದ ಜಾರಿಗೆ ಬರುವಂತೆ ಮುಂದಿನ 03 ವರ್ಷಗಳ ಒಳಗೆ ಎಂ.ಫಿಲ್. ವಿದ್ಯಾರ್ಹತೆಯನ್ನು ಹೊಂದಿರತಕ್ಕದ್ದೆಂದು ತಪ್ಪಿದಲ್ಲಿ ಸೇವೆಯಲ್ಲಿ ಮುಮದುವರೆಸಲಾಗುವುದಿಲ್ಲವೆಂದು ಒಂದು ಕಾರ್ಯಕಾರಿ ಆದೇಶ ಹೊರಡಿಸಿ, ಈ ಮಾಹಿತಿಯನ್ನು ಅಫಿಡವಿಟ್ ಮೂಲಕ ಕರ್ನಾಟಕ ಆಡಳಿತ ನ್ಯಾಯ ಮಂಡಳಿಗೆ ಸಲ್ಲಿಸಬಹುದೆಂದು ತೀರ್ಮಾನಿಸಲಾಗಿದೆ. ಆದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 119 ಡಿಸಿಇ 2005 ಬೆಂಗಳೂರು, ದಿನಾಂಕ 16ನೇ ಸೆಪ್ಟೆಂಬರ್ 2006**

ಪ್ರಸ್ತಾವನೆ ಭಾಗದಲ್ಲಿ ವಿವರಿಸಿರುವ ಸನ್ನಿವೇಶದಲ್ಲಿ ಪ್ರಸ್ತಾವನೆ ಭಾಗದ ಕ್ರಮ ಸಂಖ್ಯೆ: (3) ರಿಂಧ (7) ರವರೆಗೆ ಉಲ್ಲೇಖಿಸಿರುವ ಸರ್ಕಾರಿ ಅಧಿಸೂಚನೆಗಳನ್ವಯ ಸೇವಾ ಸಕ್ರಮಾತಿಗೊಮಡು ಈವರೆವಿಗೆ ಎನ್.ಇ.ಟಿ. / ಎಸ್.ಎಲ್.ಇ.ಟಿ. ಪರೀಕ್ಷೆಯನ್ನು ಪಾಸು ಮಾಡದಿರುವ ಉಪನ್ಯಾಸಕರುಗಳು ಈ ಆದೇಶ ಹೊರಡಿಸಿದ ದಿನಾಂಕದಿಂದ ಅನ್ವಯವಾಗುವಂತೆ 03 ವರ್ಷದ ಒಳಗೆ ಅಂದರೆ, ದಿನಾಂಕ: 16.09.2009 ರೊಳಗೆ ಎಂ.ಫಿಲ್. ವಿದ್ಯಾರ್ಹತೆಯನ್ನು ಹೊಂದತಕ್ಕದ್ದು. ತಪ್ಪಿದ್ದಲ್ಲಿ, ಮುಂದಿನ ಯಾವುದೇ ಮುನ್ಸೂಚನೆ ನೀಡದೇ ಎಂ.ಫಿಲ್. ಪರೀಕ್ಷೆ ಪಾಸು ಮಾಡದ ಉಪನ್ಯಾಸಕರುಗಳನ್ನು ಸೇವೆಯಿಂದ ವಜಾಗೊಳಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಕಾಲೇಜು ಮತ್ತು ತಾಂತ್ರಿಕ).

ಪಿ.ಆರ್. 1388

## ಸಹಕಾರ ಸಚಿವಾಲಯ

**ವಿಷಯ :** ಶ್ರೀ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ ಚುಂಚನಕಟ್ಟೆ, ಕೆ.ಆರ್. ನಗರ ತಾಲ್ಲೂಕು, ಮೈಸೂರು ಜಿಲ್ಲೆ ಇದರ ವಿಶೇಷಾಧಿಕಾರಿಗಳ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು ಕಬ್ಬು ಅಭಿವೃದ್ಧಿ ಹಾಗು ಸಕ್ಕರೆ ನಿರ್ದೇಶಕರು ರವರ ಪತ್ರ ಸಂಖ್ಯೆ ಡಿಎಸ್‌ಕೆ. / ಇಎಸ್‌ಟಿಎಸ್ / 130 / 2004-05 ದಿನಾಂಕ 18.2.2006 ಮತ್ತು 9.6.2006.

**ಪ್ರಸ್ತಾವನೆ :**

ಶ್ರೀ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಚುಂಚನಕಟ್ಟೆ ಕೆ.ಆರ್. ನಗರ ತಾಲ್ಲೂಕು ಮೈಸೂರು ಜಿಲ್ಲೆ, ಇದರ ಆಡಳಿತ ಮಂಡಳಿ ಸದಸ್ಯರು ಸಾಮೂಹಿಕವಾಗಿ ರಾಜೀನಾಮೆ ನೀಡಿದ ಪ್ರಯುಕ್ತ ಸಕ್ಕರೆ ನಿರ್ದೇಶಕರು ತಮ್ಮ ಕಛೇರಿಯ ಆದೇಶ ದಿನಾಂಕ 9.7.2004 ರಲ್ಲಿ ಜಿಲ್ಲಾಧಿಕಾರಿಗಳು ಮೈಸೂರು ಜಿಲ್ಲೆ ಇವರನ್ನು ಕಾರ್ಖಾನೆಯ ವಿಶೇಷಾಧಿಕಾರಿಗಳನ್ನಾಗಿ 6 ತಿಂಗಳ ಅವಧಿಗೆ ನೇಮಿಸಲಾಗಿದೆ. ಅದರಂತೆ ಕಾರ್ಖಾನೆಯ ವಿಶೇಷಾಧಿಕಾರಿ ಹುದ್ದೆಯ ಅಧಿಕಾರವನ್ನು ದಿನಾಂಕ 10.7.2004 ರಂದು ವಹಿಸಿಕೊಂಡಿರುತ್ತಾರೆ. ವಿಶೇಷಾಧಿಕಾರಿಗಳ ಅವಧಿಯನ್ನು ಸಕ್ಕರೆ ನಿರ್ದೇಶನಾಲಯದ ಆದೇಶ ದಿನಾಂಕ 5.1.2005ರಲ್ಲಿ ದಿನಾಂಕ 10.1.2005 ರಿಂದ 9.7.2005 ರವರೆಗೆ 6 ತಿಂಗಳುಗಳ ಅವಧಿಗೆ ವಿಸ್ತರಿಸಲಾಗಿದೆ. ತದನಂತರ 30.6.2005ರ ಆದೇಶದಲ್ಲಿ ದಿನಾಂಕ 10.7.2005 ರಿಂದ 9.1.2006 ರವರೆಗೆ 6 ತಿಂಗಳ ಅವಧಿಗೆ ವಿಸ್ತರಿಸಲಾಗಿದೆ. ಕಾರ್ಖಾನೆಯು 2005-06ನೇ ಸಾಲಿನ ಹಂಗಾಮು ಪ್ರಾರಂಭಿಸಲು ಮಾಡಿದ ಎಲ್ಲಾ ಪ್ರಯತ್ನಗಳು ವಿಫಲವಾಗಿದ್ದು ಇದಕ್ಕೆ ಮುಖ್ಯ ಕಾರಣ ಆರ್ಥಿಕ ಬಿಕ್ಕಟ್ಟು ಇರುವುದರಿಂದ ಹಾಗೂ ನೂತನ ಆಡಳಿತ ಮಂಡಳಿ ಚುನಾವಣೆ ನಡೆಸಲು ಅದಕ್ಕೆ ತಗಲುವ ಖರ್ಚನ್ನು ಭರಿಸುವುದು ಕಷ್ಟ ಸಾಧ್ಯವಾದ್ದರಿಂದ ಕಾರ್ಖಾನೆಯ ವಿಶೇಷಾಧಿಕಾರಿಗಳ ಅವಧಿಯನ್ನು ವಿಸ್ತರಿಸುವುದು ಸೂಕ್ತವೆಂದು ವ್ಯವಸ್ಥಾಪಕ ನಿರ್ದೇಶಕರು ವರದಿ ಮಾಡಿದಂತೆ ವಿಶೇಷಾಧಿಕಾರಿಗಳ ಅವಧಿಯ ದಿನಾಂಕ 9.1.2006ಕ್ಕೆ ಅಂತ್ಯವಾಗಿದ್ದು ಪುನಃ ಅವಧಿಯನ್ನು ಮುಂದುವರಿಸುವಂತೆ ಕಾರ್ಖಾನೆಯ ವಿಶೇಷಾಧಿಕಾರಿಗಳ ಠರಾವಿನೊಂದಿಗೆ ಸಲ್ಲಿಸಿದ ಪ್ರಸ್ತಾವಕ್ಕೆ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಮೇಲೆ ಓದಲಾದ ಪತ್ರ (1)ರಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡುತ್ತಾ ಕಾರ್ಖಾನೆಯ ವಿಶೇಷಧಿಕಾರಿಗಳ ಅವಧಿಯನ್ನು 10.1.2006 ರಿಂದ 6 ತಿಂಗಳುಗಳ ಅವಧಿಗೆ ವಿಸ್ತರಿಸುವ ಕುರಿತು ಸರ್ಕಾರದ ಆದೇಶವನ್ನು ಕೋರಿರುತ್ತಾರೆ. ಪ್ರಸ್ತುತ ಸದರಿ ಅವಧಿಯು ಸಹ ಈಗಾಗಲೇ ಮುಗಿದಿರುತ್ತದೆ. ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆಯನ್ನು ಎಲ್.ಆರ್.ಓ.ಟಿ ಯೋಜನೆಯಡಿ 22 ವರ್ಷಗಳ ಅವಧಿಗೆ ಗುತ್ತಿಗೆಗೆ ನೀಡಿರುವುದರಿಂದ ಕಾರ್ಖಾನೆಯ ವಿಶೇಷಾಧಿಕಾರಿಗಳ ಅವಧಿಯನ್ನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 121ರ ಪ್ರಕಾರ ಸರ್ಕಾರ ವಿಸ್ತರಿಸಬಹುದಾಗಿರುವುದರಿಂದ ದಿನಾಂಕ 10.1.2006 ರಿಮದ 9.1.2007 ರವರೆಗೆ ವಿಸ್ತರಿಸಲು ತೀರ್ಮಾನಿಸಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಕೆಳಕಂಡಂತೆ ಆದೇಶ

**ಸರ್ಕಾರಿ ಆದೇಶ ಸಂಖ್ಯೆ ಸಇ 97 ಸಸಕಾ 2006, ಬೆಂಗಳೂರು, ದಿನಾಂಕ: 6ನೇ ಸೆಪ್ಟೆಂಬರ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಶ್ರೀ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ ಚುಂಚನಕಟ್ಟೆ ಕೆ.ಆರ್. ನಗರ ತಾಲ್ಲೂಕು, ಮೈಸೂರು ಜಿಲ್ಲೆ, ಇದರ ವಿಶೇಷಾಧಿಕಾರಿಗಳ ಅವಧಿಯನ್ನು ದಿನಾಂಕ 10.1.2006 ರಿಂದ 9.1.2007ರವರೆಗೆ ವಿಸ್ತರಿಸಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 31(1)ರ ಉಪಬಂಧಗಳ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸಿರುತ್ತದೆ. ಎಂದರೆ

**31. ಪ್ರಕರಣ**

31ನೇ ಪ್ರಕರಣದ ಉಪ ಪ್ರಕರಣ (1) ಪ್ರಕರಣದಲ್ಲಿನ 1 ವರ್ಷ ಎಂಬ ಪದಗಳಿಗೆ ಬದಲಾಗಿ 24 ತಿಂಗಳುಗಳು ಎಂಬ ಪದವನ್ನು ಪ್ರತಿ ನಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣದ 31(1)ಕ್ಕೆ ಮಾಡಿದ ಮಾರ್ಪಾಡು ದಿನಾಂಕ 9.1.2007ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿನ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಕಲಂ 31(1) ರ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1389

**ಬಾಣದ ರಂಗಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಹಿರೇಕೆರೂರು ಪಟ್ಟಣಕ್ಕೆ ರೂ. 1900.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಸಿದ್ದಪಡಿಸಿರುವ ಕುಡಿಯುವ ನೀರು ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** 1) ಅಧ್ಯಕ್ಷರು ಮತ್ತು ವ್ಯ.ನಿ. ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ: ಕಜಮಂ / ತಾಂತ್ರಿಕ/ ಹೆಚ್ ಎನ್ ಆರ್ /

2) ಸರ್ಕಾರದ ಆದೇಶ ಸಂಖ್ಯೆ: ನಅಇ: 57 ಯುಎಂಎಸ್ : 06 (P) ದಿನಾಂಕ: 19.9.2006.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪ್ರಸ್ತಾವನೆಯಲ್ಲಿ ಹಿರೇಕೆರೂರು ಪಟ್ಟಣದ ಜನಸಂಖ್ಯೆಯ 2001ರ ಜನಗಣತಿಯ ಪ್ರಕಾರ 15,874 ಇದ್ದು, ಪ್ರಸ್ತುತ ಈ ಪಟ್ಟಣದ ಜನಸಂಖ್ಯೆಯು 17,500 ರಷ್ಟಾಗಿರುತ್ತದೆ. 2021 ಮತ್ತು 2036ರ ವೇಳೆಗೆ ಸದರಿ ಪಟ್ಟಣದ ಜನಸಂಖ್ಯೆಯು ಕ್ರಮವಾಗಿ 22,570 ಮತ್ತು 29000 ರಷ್ಟಾಗುತ್ತದೆಂದು ಅಂದಾಜಿಸಿದ್ದು, ಪ್ರಸ್ತುತ ಹಿರೇಕೆರೂರು ಪಟ್ಟಣಕ್ಕೆ ಕೊಳವೆ ಬಾವಿಗಳಿಂದ ನೀರನ್ನು ಸರಬರಾಜು ಮಾಡಲಾಗುತ್ತಿದ್ದು, ಈ ಪಟ್ಟಣದಲ್ಲಿ ಒಟ್ಟು 93 ಕೊಳವೆ ಬಾವಿಗಳಿದ್ದು, ಇದರಲ್ಲಿ 43 ಕೊಳವೆ ಬಾವಿಗಳಿಗೆ ಕೈ ಪಂಪುಗಳನ್ನು ಅಳವಡಿಸಲಾಗಿದ್ದು ಮತ್ತು 25 ಕೊಳವೆ ಬಾವಿಗಳಿಗೆ ಪವರ್ ಪಂಪುಗಳನ್ನು ಅಳವಡಿಸಲಾಗಿರುತ್ತದೆ. ಪಟ್ಟಣದ ವಿವಿಧ ಸ್ಥಳಗಳಲ್ಲಿರುವ ಮೇಲ್ಮಟ್ಟದ ಜಲಸಂಗ್ರಹಾಗಾರಗಳಿಗೆ ನೇರವಾಗಿ ನೀರನ್ನು ಪಂಪು ಮಾಡಲಾಗುತ್ತಿದೆ. ಮಳೆಯ ಅಭಾವದ ಕಾರಣದಿಂದ ಕೊಳವೆ ಬಾವಿಗಳಲ್ಲಿ ನೀರಿನ ಮಟ್ಟ ಕುಸಿಯುತ್ತಿದ್ದು, ಮತ್ತು ಕೆಲವು ಕೊಳವೆ ಬಾವಿಗಳು ಬೇಸಿಗೆ ಕಾಲದಲ್ಲಿ ಒಣಗಿಹೋಗುತ್ತದೆ. ಹಿರೇಕೆರೂರು ಪಟ್ಟಣಕ್ಕೆ 25 LPCD ಪ್ರಮಾಣದ ನೀರನ್ನು ಸರಬರಾಜು ಮಾಡಲಾಗುತ್ತಿದೆ.

ಕುಡಿಯುವ ನೀರಿನ ಅಭಾವದ ಕಾರಣ ಹಿರೇಕೆರೂರು ಪಟ್ಟಣಕ್ಕೆ ರೂ. 1900.00 ಲಕ್ಷ ರೂ.ಗಳ ಅಂದಾಜು ವೆಚ್ಚದಲ್ಲಿ ತುಂಗಭದ್ರಾ ನದಿಯನ್ನು ಮೂಲವಾಗಿಟ್ಟುಕೊಂಡು ತುಮ್ಮಿನಕಟ್ಟೆ ಬಳಿ ನೀರು ಸರಬರಾಜು ಯೋಜನೆಯನ್ನು ರೂಪಿಸಲಾಗಿದೆ. ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ಈ ಯೋಜನೆಯನ್ನು 2006-07ನೇ ಕ್ರಿಯಾ ಯೋಜನೆಯಲ್ಲಿ ಸೇರಿಸಿಕೊಂಡಿದ್ದು, ಮಂಡಳಿಯು 640.00 ಲಕ್ಷ ರೂ.ಗಳನ್ನು ಮೀಸಲಿರಿಸಿರುವುದರಿಂದ, ರೂ. 1900.00 ಲಕ್ಷ ರೂ.ಗಳ ಅಂದಾಜು ವೆಚ್ಚವನ್ನು ತಯಾರಿಸಿ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು ಸರ್ಕಾರವನ್ನು ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 26 ಯುಡಬ್ಲ್ಯೂಎಸ್ 2005 ಬೆಂಗಳೂರು, ದಿನಾಂಕ: 19ನೇ ಸೆಪ್ಟೆಂಬರ್ 2006**

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದ್ದು, ಹಿರೇಕೆರೂರು ಪಟ್ಟಣಕ್ಕೆ ತುಂಗಭದ್ರಾ ನದಿಯನ್ನು ಮೂಲವಾಗಿಟ್ಟು ಕೊಂಡು 1900.00 ಲಕ್ಷ ರೂ.ಗಳ (ರೂಪಾಯಿ ಒಂದು ಸಾವಿರದ ಒಂಬೈನೂರು ಲಕ್ಷಗಳು ಮಾತ್ರ) ಅಂದಾಜು ವೆಚ್ಚದಲ್ಲಿ ನೀರು ಸರಬರಾಜು ಯೋಜನೆಗೆ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

(1) The Escalation cost of Rs. 1,77,60,047 must not be included in the total project cost. No escalation shall be borne by the Government.

(2) Water rates as proposed by KUWS&DB has to be implemented by the ULB to take care of O&M cost.

(3) ಸದರಿ ಯೋಜನೆಯನ್ನು ನಿಗಧಿತ ವೇಳೆಯಲ್ಲಿ ಪೂರ್ಣಗೊಳಿಸುವುದು.

(4) ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000ನ್ನು ಪಾಲಿಸುವುದು.

(5) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡಕೂಡದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವೈ. ಸಾಗರ**

ಪಿ.ಆರ್. 1392

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

## PERSONNEL AND ADMINISTRATIVE REFORMS SECRETARIAT

**Sub :** Sanction of Medical expenses, telephone charges and Servant allowance to the retired Chief Justices and Judges appointed in High Court of Karnataka and retired elseware.

**Read :** 1. G.O. No. DPAR 84 SHC 2004, dated: 15.10.2004.

2. Correspondence resting with letter No. RPS 71/2002 dated: 31.01.2005 of the Registrar General, High Court of Karnataka, Bangalore.

**PREAMBLE:**

In the Government Order read at (1) above, sanction has been accorded to extend the following facilities to the retired Chief Justices and Judges who have retired from the High Court of Karnataka subject to certain conditions.

| Reimbursement of | High Court Judges (Retired) | Chief Justices (Retired) |
|---|---|---|
| Servant Allowances | Rs. 2,500/- P.M. | Rs. 3,000/- P.M. |
| Telephone Charges | Rs. 1,000/- P.M. | Rs. 1,500/- P.M. |
| Medical expenses | Rs. 10,000/- P.A. | Rs. 15,000/- P.A. |

The Registrar General, High Court of Karnataka, Bangalore has in his letter read at (2) above stated that the Judges who were appointed in Karnataka High Court have been transferred to different High Courts of the country by virtue of the transfer policy and also on account of the fact that they have been appointed as Chief Justices. Therefore, the stay of the Hon'ble Judges in other High Courts other than Karnataka High Curt shall not be a ground to deny them the benefit of the above Government Order and hence requested to issue a modified Government Order. The State Government have examined the proposal and following orders are issued :

**GOVERNMENT ORDER No. DPAR 84 SHC 2004 BANGALORE, DATED: 22nd September 2006.**

Government are pleased to extend the benefits of re-imbursement of medical expenses, telephone charges and servant allowance to the retired Chief Justices, Judges appointed in Karnataka and transferred elseware and later retired elsewhere in terms of Government Order No. DPAR 84 SHC 2004 dated 15.10.04. Other conditions applicable are.

a) They are not engaged or re-employed in any Government assignments / commissions / committees which entitles them for the same or similar facilities mentioned in this Government Order.

b) They are not receiving allowances similar to the allowances specified in this Government Order from the respective States where they have retired as Chief Justices / Judges of the High Court.

c) The reimbursement of medical expenses shall be covered by the Karnataka Ministers, Ministers of State and Deputy Ministers Medical Attendance Rules. 1958 as applicable to the sitting Chief Justice / Judges of the High Court of Karnataka subject to the limits prescribed in the Government Order i.e. at the rate of Rs. 10,000/- p.a. to the retired High Court Judges and Rs. 15,000/-p.a. to retired High Court Chief Justice.

The Registrat General, High Court of Karnataka shall be the drawing and disbursing Officer in respect of the above items preferred by the retired Chief Justices and Judges.

The expenditure in this regard is debitable to the head of account 2014-00-102-0-01 High Court Judges.

This Order issues with the concurrence of Finance Department vide its U.O. No. FD 856 Exp-7/06 dated 20.9.2006.

By Order and in the name of the Governor of Karnataka,

P.R. 1415

**K. Raghuram Bhandary**

Under Secretary to Government, DPAR (Services-3).

**ಶಿಕ್ಷಣ ಸಚಿವಾಲಯ**

**ಸುತ್ತೋಲೆ**

**ಸಂಖ್ಯೆ: ಇಡಿ 165 ಪಿಜಿಸಿ 2006, ಬೆಂಗಳೂರು, ದಿನಾಂಕ: 20ನೇ ಸೆಪ್ಟೆಂಬರ್ 2006**

**ವಿಷಯ:** ಮಕ್ಕಳು ಶಾಲೆಗೆ ಸೇರುವಾಗ ಜಾತಿಯನ್ನು ನಮೂದಿಸಿಲ್ಲವೆಂಬ ಕಾರಣಕ್ಕೆ ಪ್ರವೇಶವನ್ನು ನಿರಾಕರಿಸುತ್ತಿರುವ ಬಗ್ಗೆ.

ಮಕ್ಕಳು ಶಾಲೆಗೆ ಸೇರುವಾಗ ಅರ್ಜಿ ನಮೂನೆಯಲ್ಲಿ ಜಾತಿಯನ್ನು ನಮೂದಿಸಿಲ್ಲವೆಂಬ ಕಾರಣಕ್ಕೆ ಅವರನ್ನು ಶಾಲೆಗೆ ಸೇರಿಸಿಕೊಳ್ಳದೇ ನಿರಾಕರಿಸುತ್ತಿರುವುದು ಹಾಗೂ ಅವರು ಒಂದು ಶಾಲೆಯಿಂದ ವರ್ಗಾವಣೆಗೊಂಡು ಇನ್ನೊಂದು ಶಾಲೆಗೆ ಸೇರುವಾಗ ವರ್ಗಾವನೆ ಪ್ರಮಾಣ ಪತ್ರದಲ್ಲಿ ಜಾತಿಯನ್ನು ನಮೂದಿಸಿಲ್ಲವೆಂಬ ಕಾರಣಕ್ಕೆ ಶಾಲೆಗಳು ಅವರಿಗೆ ವರ್ಗಾವಣಾ ಪ್ರಮಾಣ ಪತ್ರ ನೀಡದಿರುವುದು ಅಥವಾ ಇದೆ ಕಾರಣಕ್ಕೆ ಪ್ರವೇಶವನ್ನು ನಿರಾಕರಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಉದಾ: ಇತ್ತೀಚೆಗೆ ಮೈಸೂರಿನ ಶಾಲೆಯೊಂದರಲ್ಲಿ ವಿದ್ಯಾರ್ಥಿಯು ತನ್ನ ಜಾತಿಯನ್ನು ನಮೂದಿಸಿಲ್ಲವೆಂಬ ಕಾರಣಕ್ಕೆ ವರ್ಗಾವಣೆ ಪ್ರಮಾಣ ಪತ್ರವನ್ನು ನೀಡದೇ ನಿರಾಕರಿಸುತ್ತಿರುವ ಬಗ್ಗೆ ಕಳೆದ ಅಧಿವೇಶನದಲ್ಲಿ ವಿಧಾನ ಪರಿಷತ್ತಿನ ಮಾನ್ಯ ಸದಸ್ಯರುಗಳು ತೀವ್ರ ಆಕ್ಷೇಪವನ್ನು ಎತ್ತಿರುತ್ತಾರೆ.

2. ತಂದೆ ತಾಯಿ ಯಾರೆಂದು ಗೊತ್ತಿಲ್ಲದ ಅನಾಥ ಮಕ್ಕಳು, ಇತರ ಮಕ್ಕಳು ಶಾಲೆಗೆ ಪ್ರವೇಶ ಪಡೆಯುವ ಸಂದರ್ಭದಲ್ಲಿ ಹಾಗೂ ವರ್ಗಾವಣೆಗೊಂಡು ಮತ್ತೊಂದು ಶಾಲೆಗೆ ಸೇರುವ ಸಂದರ್ಭದಲ್ಲಿ ಜಾತಿ ನಮೂದಿಸಬೇಕೆಂಬ ನಿಯಮ ಪಾಲನೆಯಿಂದ ಅವರ ವಿದ್ಯಾಭ್ಯಾಸಕ್ಕೆ ತೀವ್ರ ಧಕ್ಕೆಯುಂಟಾಗುತ್ತದೆ ಹಾಗೂ ಅವರು ಕಲಿಕೆಯಿಂದ ವಂಚಿತರಾಗುವ ಸಂಭವವಿರುತ್ತದೆ.

3. ಆದ್ದರಿಂದ ಮೇಲೆ ತಿಳಿಸಿರುವಂತಹ ಮಕ್ಕಳು ಶಾಲೆಗೆ ಪ್ರವೇಶ ಪಡೆಯುವಾಗ ಅರ್ಜಿಯಲ್ಲಿ ಅಥವಾ ಒಂದು ಶಾಲೆಯಿಂದ ಮತ್ತೊಂದು ಶಾಲೆಗೆ ವರ್ಗಾವಣೆ ಹೊಂದುವಾಗ ವರ್ಗಾವಣೆ ಪ್ರಮಾಣ ಪತ್ರದಲ್ಲಿ ಜಾತಿಯನ್ನು ನಮೂದಿಸಬೇಕೆಂದು ಕಡ್ಡಾಯ ಮಾಡಬಾರದೆಂದು ರಾಜ್ಯದ ಎಲ್ಲಾ ಶಾಲೆಗಳಿಗೆ ಈ ಮೂಲಕ ನಿರ್ದೇಶನ ನೀಡಲಾಗಿದೆ.

4. ಈ ಮೇಲಿನ ನಿರ್ದೇಶನವನ್ನು ರಾಜ್ಯದ ಎಲ್ಲಾ ಶಾಲೆಗಳು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

**ಬಿ.ಹೆಚ್. ಪಡಸಲಗಿ**

ಪಿ.ಆರ್. 1413 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

## ಸುತ್ತೋಲೆ

**ಸಂಖ್ಯೆ: ಇಡಿ 171 ಪಿಜಿಸಿ 2006, ಬೆಂಗಳೂರು, ದಿನಾಂಕ: 05ನೇ ಅಕ್ಟೋಬರ್ 2006**

**ವಿಷಯ:** ಪೂರ್ವ ಪ್ರಾಥಮಿಕ ಶಾಲೆಗಳನ್ನು ಕಡ್ಡಾಯವಾಗಿ ನೋಂದಾಯಿಸುವ ಬಗ್ಗೆ.

**ಓದಲಾಗಿದೆ:** ದಿ. 23.11.2005ರ ಸುತ್ತೋಲೆ ಸಂಖ್ಯೆ ಇಡಿ 273 ಪಿಜಿಸಿ 2005.

ಪೂರ್ವ ಪ್ರಾಥಮಿಕ ಶಾಲೆಗಳನ್ನು ಕಡ್ಡಾಯವಾಗಿ ನೋಂದಣಿ ಮಾಡುವ ಬಗ್ಗೆ ದಿ. 23.11.2005ರ ಸುತ್ತೋಲೆ ಸಂಖ್ಯೆ ಇಡಿ 273 ಪಿಜಿಸಿ 2005 ರನ್ವಯ ಕೆಲ ಸೂಚನೆಗಳನ್ನು ನೀಡಲಾಗಿದೆ.

ಈ ವಿಷಯವನ್ನು ಸರ್ಕಾರ ಪುನರ್ ಪರಿಶೀಲಿಸಿ, ಕಡ್ಡಾಯ ನೋಂದಣಿ ವಿಚಾರವಾಗಿ ಹೊರಡಿಸಲಾದ ಉಲ್ಲೇಖಿತ, ದಿ. 23.11.2005ರ ಸುತ್ತೋಲೆಯನ್ನು ಭಾಗಶಃ ಮಾರ್ಪಡಿಸಿ, ಅದರನ್ವಯ ನೀಡಲಾದ ಸೂಚನೆಗಳು ಪ್ರಾಥಮಿಕ ಶಾಲೆಗಳಿಗೆ ಹೊಂದಿಕೊಂಡಂತಹ (ಅಂದರೆ, ಪ್ರಾಥಮಿಕ ಶಾಲೆ ನಡೆಸುತ್ತಿರುವ ಆವರಣದಲ್ಲೇ ನಡೆಸಲಾಗುತ್ತಿರುವ) ಪೂರ್ವ ಪ್ರಾಥಮಿಕ ಶಾಲೆಗಳಿಗೆ ಮಾತ್ರ ಸೀಮಿತಗೊಳಿಸಿ ಅನ್ವಯಿಸತಕ್ಕದ್ದೆಂದು, ಅಂದರೆ, ಪ್ರಾಥಮಿಕ ಶಾಲೆಗಳಿಗೆ ಹೊಂದಿಕೊಳ್ಳದೇ, ಪ್ರಾಥಮಿಕ ಶಾಲೆಗಳು ನಡೆಸುತ್ತಿರುವ ಆವರಣದಲ್ಲೇ ನಡೆಸದೇ, ಪ್ರತ್ಯೇಕವಾಗಿ ನಡೆಸುತ್ತಿರುವ ಪೂರ್ವ ಪ್ರಾಥಮಿಕ ಶಾಲೆಗಳಿಗೆ ಅದನ್ನು ಅನ್ವಯಿಸತಕ್ಕದ್ದಲ್ಲವೆಂದು ಈ ಮೂಲಕ ಸೂಚಿಸಿದೆ.

**ಬಿ.ಹೆಚ್. ಪಡಸಲಗಿ**

ಪಿ.ಆರ್. 1468 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಡಿಆರ್‌ಡಿಎ ಆಡಳಿತ ಯೋಜನೆಯಡಿ ಬದಲಿ ವಾಹನ ಖರೀದಿಸುವ ಬಗ್ಗೆ.

**ಓದಲಾಗಿದೆ:** (1) ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ ಆರ್ 20015-32-2004 ಡಿಆರ್‌ಡಿಎ ದಿನಾಂಕ 03.01.2005.

(2) ಬೀದರ್ ಜಿಲ್ಲಾ ಪಂಚಾಯತ್‌ರವರ ಪತ್ರ ಸಂಖ್ಯೆ ಜಿಪಂಬಿ. ಉಗ್ರಾಣ ಶಾಖೆ / ಸಿಆರ್- / 30485 / 2005-06, ದಿನಾಂಕ: 16/22.02.2006.

**ಪ್ರಸ್ತಾವನೆ :**

ಕೇಂದ್ರ ಸರ್ಕಾರವು ಉಲ್ಲೇಖ (1)ರ ಪತ್ರದಲ್ಲಿ ಬದಲಿ ವಾಹನ ಖರೀದಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡಿರುತ್ತದೆ. ಇದರನ್ವಯ ಬೀದರ್ ಜಿಲ್ಲಾಪಂಚಾಯತ್ ದಿನಾಂಕ: 22.02.2006ರಂದು ಬದಲಿ ವಾಹನ ಖರೀದಿಸುವ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿತು. ದಿನಾಂಕ: 05.08.2005ರಂದು ಬೀದರ್ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಅಂಬಾಸಡರ್ ಪೆಟ್ರೋಲ್ ಕಾರ್ ಸಂಖ್ಯೆ ಎಂವೈಐ 7389 ನ್ನು ಅನುಪಯುಕ್ತವೆಂದು ಘೋಷಿಸಿ ಇದರ ಅಂದಾಜು ಬೆಲೆ ಕ್ರಮವಾಗಿ ರೂ. 3,000/- ಎಂದು ತಿಳಿಸಿದ್ದರು. ಸದರಿ ಜಿಲ್ಲಾ ಪಂಚಾಯತ್‌ರವರು ಹೊಸ ವಾಹನವನ್ನು ಖರೀದಿಸಲು ಮೆ: ಅವಿನಾಶ್ ಮತ್ತು ಕಂಪನಿ, ಗುಲ್ಬರ್ಗ ರವರಿಂದ ರೂ. 5,68,043/- ಬೆಲೆಯ ಮಹೀಂದ್ರ ಬೊಲೆರೊ ಜಿಎಲ್‌ಎಕ್ಸ್ ಅಥವಾ ರೂ.5,77,936 ಬೆಲೆಯ ಬೊಲೆರೊ ಎಸ್‌ಎಲ್‌ಎಕ್ಸ್ ಖರೀದಿಸಲು proforma invoice ನ್ನು ಪಡೆದು ಸಲ್ಲಿಸಿರುತ್ತಾರೆ. ಓದಲಾಗಿದೆ (2)ರ ದಿನಾಂಕ 22.02.2006ರ ಪತ್ರದಲ್ಲಿ ಕೇಂದ್ರ ಕಛೇರಿಯಲ್ಲಿ ಉಪಯೋಗಿಸುತ್ತಿರುವ ಎಂವೈಐ 7389 ವಾಹನವು ಅನುಪಯುಕ್ತವಾಗಿದ್ದು, ಡಿ.ಆರ್.ಡಿ.ಎ. ಆಡಳಿತ ಯೋಜನೆಯಡಿಯಲ್ಲಿ ಲಭ್ಯವಿರುವ ಹಣದಿಂದ ಹೊಸ ವಾಹನ ಖರೀದಿಸಲು ಅನುಮತಿ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಗಣಿಸಿ ಹಳೆ ವಾಹನ ಹರಾಜು ಮಾಡಿ ಬಂದ ಹಣ ಹಾಗೂ ಡಿಆರ್‌ಡಿಎ ಆಡಳಿತ ಯೋಜನೆಯಲ್ಲಿ ಉಳಿಯುವ ಹಣದಿಂದ ರೂ. 4,25,000/- ಗಳ ಮಿತಿಯೊಳಗೆ ಒಂದು ಹೊಸ ವಾಹನ ಖರೀದಿಸಲು ಅನುಮತಿ ನೀಡಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 7 ಸ್ವಜಯೋ (ಡಿಆರ್‌ಡಿಎ) 2006, ಬೆಂಗಳೂರು, ದಿನಾಂಕ: 18ನೇ ಸೆಪ್ಟೆಂಬರ್ 2006**

ರಾಜ್ಯ ಸರ್ಕಾರವು ಬೀದರ್ ಜಿಲ್ಲಾ ಪಂಚಾಯತಿಯಲ್ಲಿ ಉಪಯೋಗಿಸುತ್ತಿರುವ ಎಂವೈಐ 7389 ಕಾರಿನ ಬದಲಿಗೆ ಒಂದು ಹೊಸ ವಾಹನ ರೂ. 4,25,000-00 (ರೂ. ನಾಲ್ಕು ಲಕ್ಷದ ಇಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ) ಗಳ ಗರಿಷ್ಠ ಮಿತಿಗೊಳಪಟ್ಟು ಖರೀದಿಸಲು ಈ ಕೆಳಕಂಡ ಷರತ್ತಿಗೊಳಪಟ್ಟು ಅನುಮೋದನೆ ನೀಡಿದೆ.

* ಹೊಸ ವಾಹನವನ್ನು ಕೇಂದ್ರ ಸರ್ಕಾರದ ಪತ್ರ ಆರ್ 20015-32-2004 ಡಿಆರ್‌ಡಿಎ ದಿನಾಂಕ 03.01.2005 ರನ್ವಯ ಖರೀದಿಸತಕ್ಕದ್ದು.
* ಡಿಆರ್‌ಡಿಎ ಆಡಳಿತ ಯೋಜನೆಯಡಿ ಜಿಲ್ಲೆಗೆ ನಿಗದಿಪಡಿಸಿರುವ ಅನುದಾನದಿಂದ ಭರಿಸತಕ್ಕದ್ದು.
* ಹಳೆ ವಾಹನ ಹರಾಜು ಮಾಡಿ ಬಂದ ಹಣವನ್ನು ಹೊಸ ವಾಹನದ ಖರೀದಿಗೆ ಬಳಸತಕ್ಕದ್ದು.
* ವಾಹನ ಖರೀದಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಲಭ್ಯವಿರುವ ಅನುದಾನ ರೂ. 4,25,000-00 (ರೂ. ನಾಲ್ಕು ಲಕ್ಷದ ಇಪ್ಪತ್ತೈದು ಸಾವಿರದ ನಾಲ್ಕು ರೂಪಾಯಿಗಳು ಮಾತ್ರ) ಗಳ ಗರಿಷ್ಠ ಮಿತಿಗೊಳಪಟ್ಟು ಖರೀದಿಸತಕ್ಕದ್ದು, ಯಾವುದೇ ಕಾರಣಕ್ಕೂ ಆರ್ಥಿಕ ಮಿತಿ ಮೀರತಕ್ಕದ್ದಲ್ಲ.

* ವೇತನಕ್ಕಾಗಿ ಖರ್ಚು ಮಾಡುವ ಗರಿಷ್ಠ ಶೇ. 30 ರಲ್ಲಿ ಉಳಿತಾಯವಾಗುವ ಸಾದಿಲ್ವಾರು ವೆಚ್ಚದಿಂದ ಭರಿಸತಕ್ಕದ್ದು ಹಾಗೂ ಖರೀದಿಸಿದ ನಂತರ ಸರ್ಕಾರಕ್ಕೆ ತಿಳಿಸತಕ್ಕದ್ದು.
* ವಾಹನ ಖರೀದಿಯು ಸರ್ಕಾರದ ಖರೀದಿ ನಿಯಮಗಳನ್ವಯ ಇರತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತಿ ಸಂಖ್ಯೆ ಆಇ 669 ವೆಚ್ಚ 6/2006 ದಿನಾಂಕ 07.09.2006 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1450

**ಆರ್. ಶಾಂತರಾಜ್**

ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಅಪರ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆ.

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಬೆಂಗಳೂರಿನಲ್ಲಿ ಲೋಕೋಪಯೋಗಿ ಇಲಾಖೆಯ ಕಾವೇರಿ ಅತಿಥಿಗೃಹದ ಕೊಠಡಿಗಳ ಬಾಡಿಗೆಯನ್ನು ಪರಿಷ್ಕರಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಲೋಇ 40 ಬಿಎಂಪಿ 84, ದಿನಾಂಕ 24.12.1990.
2) ಸರ್ಕಾರಿ ಆದೇಶ ಸಂಖ್ಯೆ: ಲೋಇ 59 ಬಿಪಿಎಂ 92, ದಿನಾಂಕ 1.08.1992.
3) ಸರ್ಕಾರಿ ಆದೇಶ ಸಂಖ್ಯೆ: ಲೋಇ 115 ಬಿಪಿಎಂ 82, ದಿನಾಂಕ 18.7.1994.
4) ಸರ್ಕಾರಿ ಆದೇಶ ಸಂಖ್ಯೆ: ಲೋಇ 3 ಬಿಜಿಎಂ 96, ದಿನಾಂಕ 28.8.1996.
5) ಸರ್ಕಾರಿ ಆದೇಶ ಸಂಖ್ಯೆ: ಲೋಇ 34 ಬಿಟಿಐ 2001, ದಿನಾಂಕ 14.8.2003.
6) ಮುಖ್ಯ ಎಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರ ಪತ್ರ ಸಂಖ್ಯೆ: ಸಂಕ ದ: ಕನಿಶಾ / ಎಇ-5 / 04-05, ದಿನಾಂಕ: 24.1.2005

**ಪ್ರಸ್ತಾವನೆ :**

ಬೆಂಗಳೂರಿನಲ್ಲಿರುವ ಲೋಕೋಪಯೋಗಿ ಇಲಾಖೆಯ ಅಧೀನದಲ್ಲಿರುವ ಕಾವೇರಿ ಅತಿಥಿಗೃಹದ ಕೊಠಡಿಗಳ ಬಾಡಿಗೆಯನ್ನು ರಾಜ್ಯದ ಎಂ.ಪಿ. ಎಂ.ಎಲ್.ಎ., ಮಾಜಿ ಎಂ.ಪಿ., ಎಂ.ಎಲ್.ಎ., ಎಂ.ಎಲ್.ಸಿ. ಹಾಗೂ ಖಾಸಗಿ ವ್ಯಕ್ತಿಗಳಿಗೆ ಮತ್ತು ಸ್ವಾತಂತ್ರ್ಯ ಯೋಧರಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (1) ರಿಂದ (5) ರಲ್ಲಿನ ಸರ್ಕಾರಿ ಆದೇಶಗಳಲ್ಲಿ ಬಾಡಿಗೆಯನ್ನು ನಿಗದಿಪಡಿಸಿ ಆದೇಶ ಹೊರಡಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂ. (6)ರ ಮುಖ್ಯ ಎಂಜನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ಪತ್ರದಲ್ಲಿ ಬೆಂಗಳೂರಿನ ಅರಮನೆ ರಸ್ತೆಯಲ್ಲಿರುವ ಕಾವೇರಿ ಅತಿಥಿಗೃಹದ ಕೊಠಡಿಗಳ ಬಾಡಿಗೆ ದರವು ಸರ್ಕಾರಿ ಆದೇಶ ದಿನಾಂಕ: 14.8.2003 ರನ್ವಯ ಒಂದು ವರ್ಷದ ಅವಧಿಗೆ ಮಾತ್ರ ಚಾಲ್ತಿಯಲ್ಲಿದ್ದು ಈ ಅವಧಿಯು ಈಗಾಗಲೇ ಮುಗಿದಿರುವುದರಿಂದ ಇನ್ನು ಮುಂದಿನ ಅವಧಿಗೆ ಸದರಿ ಕೊಠಡಿಗಳ ಬಾಡಿಗೆ ದರಗಳನ್ನು ಪರಿಷ್ಕರಿಸಿ ಪರಿಷ್ಕೃತ ಬಾಡಿಗೆ ದರಗಳಿಗೆ ಸರ್ಕಾರದ ಅನುಮೋದನೆ ನೀಡುವಂತೆ ಶಿಫಾರಸ್ಸಿನೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 57 ಬಿಟಿಐ 2004, ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್ 2006**

ಬೆಂಗಳೂರಿನ ಕಾವೇರಿ ಅತಿಥಿಗೃಹದ ಕೊಠಡಿಗಳ ಬಾಡಿಗೆ ದರವನ್ನು ಈ ಕೆಳಕಂಡಂತೆ ಪರಿಷ್ಕರಿಸಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರದ ಮಂಜೂರಾತಿ ನೀಡಿದೆ.

| ಕ್ರ. ಸಂ. | ವಿವರ ಯಾವ ವರ್ಗದವರಿಗೆ | ಮೊದಲ 5 ದಿನಗಳಿಗೆ ಒಂದು ಹಾಸಿಗೆ ಕೊಠಡಿಗೆ | 5 ದಿನಗಳ ನಂತರದ ದಿನಗಳಿಗೆ ಒಂದು ಹಾಸಿಗೆ ಕೊಠಡಿ ಬಾಡಿಗೆ | ಹೆಚ್ಚುವರಿ ಒಬ್ಬ ಅತಿಥಿಗಾಗಿ | ಮೊದಲ 5 ದಿನಗಳಿಗೆ ಎರಡು ಹಾಸಿಗೆಯ ಒಂದು ಕೊಠಡಿ ಬಾಡಿಗೆ | 5 ದಿನಗಳ ನಂತರ ಎರಡು ಹಾಸಿಗೆಯ ಒಂದು ಕೊಠಡಿಯ ಬಾಡಿಗೆ | ಹೆಚ್ಚುವರಿ ಹಾಸಿಗೆಗೆ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ರಾಜ್ಯದ ಮಾನ್ಯ ಎಂ.ಪಿ. (ಲೋಕಸಭಾ, ರಾಜ್ಯಸಭಾ ಸದಸ್ಯರು) ಎಂ.ಎಲ್.ಎ. ಹಾಗೂ ಎಂ.ಎಲ್.ಸಿ. | ಪ್ರತಿದಿನಕ್ಕೆ ರೂ. 90.00 | ಪ್ರತಿದಿನಕ್ಕೆ ರೂ. 120.00 | ಪ್ರತಿದಿನಕ್ಕೆ ರೂ. 60.00 | ಪ್ರತಿದಿನಕ್ಕೆ ರೂ. 180.00 | ಪ್ರತಿದಿನಕ್ಕೆ ರೂ. 210.00 | ಪ್ರತಿದಿನಕ್ಕೆ ರೂ. 60.00 |
| 2. | a) ರಾಜ್ಯದ ಮಾಜಿ ಎಂ.ಎಲ್.ಎ ಮತ್ತು ಎಂ.ಎಲ್.ಸಿ. | ಪ್ರತಿದಿನಕ್ಕೆ ರೂ. 120.00 | ಪ್ರತಿದಿನಕ್ಕೆ ರೂ. 150.00 | ಪ್ರತಿದಿನಕ್ಕೆ ರೂ. 60.00 | ಪ್ರತಿದಿನಕ್ಕೆ ರೂ. 240.00 | ಪ್ರತಿದಿನಕ್ಕೆ ರೂ. 270.00 | ಪ್ರತಿದಿನಕ್ಕೆ ರೂ. 60.00 |
| | b) ರಾಜ್ಯದ ಮಾಜಿ ಎಂ.ಪಿ. (ಲೋಕಸಭಾ ಮತ್ತು ರಾಜ್ಯಸಭಾ ಸದಸ್ಯರು) | ಪ್ರತಿದಿನಕ್ಕೆ ರೂ. 120.00 | ಪ್ರತಿದಿನಕ್ಕೆ ರೂ. 150.00 | ಪ್ರತಿದಿನಕ್ಕೆ ರೂ. 60.00 | ಪ್ರತಿದಿನಕ್ಕೆ ರೂ. 240.00 | ಪ್ರತಿದಿನಕ್ಕೆ ರೂ. 270.00 | ಪ್ರತಿದಿನಕ್ಕೆ ರೂ. 60.00 |
| 3. | a) ಹೊರ ರಾಜ್ಯದ ಹಾಲಿ ಎಂ.ಪಿ., ಎಂ.ಎಲ್.ಎ. ಹಾಗೂ ಎಂ.ಎಲ್.ಸಿ. | ಪ್ರತಿದಿನಕ್ಕೆ ರೂ. 150.00 | ಪ್ರತಿದಿನಕ್ಕೆ ರೂ. 180.00 | ಪ್ರತಿದಿನಕ್ಕೆ ರೂ. 60.00 | ಪ್ರತಿದಿನಕ್ಕೆ ರೂ. 300.00 | ಪ್ರತಿದಿನಕ್ಕೆ ರೂ. 330.00 | ಪ್ರತಿದಿನಕ್ಕೆ ರೂ. 60.00 |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| | b) ಹೊರ ರಾಜ್ಯದ ಮಾಜಿ ಎಂ.ಪಿ., ಎಂ.ಎಲ್.ಎ. ಹಾಗೂ ಎಂ.ಎಲ್.ಸಿ. | ಪ್ರತಿದಿನಕ್ಕೆ ರೂ. 150.00 | ಪ್ರತಿದಿನಕ್ಕೆ ರೂ. 180.00 | ಪ್ರತಿದಿನಕ್ಕೆ ರೂ. 60.00 | ಪ್ರತಿದಿನಕ್ಕೆ ರೂ. 300.00 | ಪ್ರತಿದಿನಕ್ಕೆ ರೂ. 330.00 | ಪ್ರತಿದಿನಕ್ಕೆ ರೂ. 60.00 |
| 4. | ಕೆಲಸದ ಮೇಲೆ ಬರುವ ಸರ್ಕಾರಿ ನೌಕರರಿಗೆ ಮತ್ತು ಅಧಿಕಾರಿಗಳಿಗೆ | ಪ್ರತಿದಿನಕ್ಕೆ ರೂ. 60.00 | ಪ್ರತಿದಿನಕ್ಕೆ ರೂ. 90.00 | ಪ್ರತಿದಿನಕ್ಕೆ ರೂ. 50.00 | ಪ್ರತಿದಿನಕ್ಕೆ ರೂ. 120.00 | ಪ್ರತಿದಿನಕ್ಕೆ ರೂ. 150.00 | ಪ್ರತಿದಿನಕ್ಕೆ ರೂ. 50.00 |
| 5. | ಖಾಸಗಿ ವ್ಯಕ್ತಿಗಳಿಗೆ | ಪ್ರತಿದಿನಕ್ಕೆ ರೂ. 250.00 | ಪ್ರತಿದಿನಕ್ಕೆ ರೂ. 300.00 | ಪ್ರತಿದಿನಕ್ಕೆ ರೂ. 150.00 | ಪ್ರತಿದಿನಕ್ಕೆ ರೂ. 450.00 | ಪ್ರತಿದಿನಕ್ಕೆ ರೂ. 500.00 | ಪ್ರತಿದಿನಕ್ಕೆ ರೂ. 150.00 |
| 6. | ಮಾನ್ಯ ಸ್ವಾತಂತ್ರ್ಯ ಯೋಧರಿಗೆ | ಪ್ರತಿದಿನಕ್ಕೆ ರೂ. 50.00 | ಪ್ರತಿದಿನಕ್ಕೆ ರೂ. 75.00 | ಪ್ರತಿದಿನಕ್ಕೆ ರೂ. 40.00 | ಪ್ರತಿದಿನಕ್ಕೆ ರೂ. 100.00 | ಪ್ರತಿದಿನಕ್ಕೆ ರೂ. 125.00 | ಪ್ರತಿದಿನಕ್ಕೆ ರೂ. 40.00 |

ಈ ಆದೇಶವನ್ನು ಲೋಕೋಪಯೋಗಿ ಇಲಾಖೆ (ಆರ್ಥಿಕ ಕೋಶ) ದ ಟಿಪ್ಪಣಿ ಸಂಖ್ಯೆ: ಲೋಇ 361 ಎಫ್‌ಸಿ-3/06 ದಿನಾಂಕ: 17.8.2006ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಈ ಆದೇಶಕ್ಕೆ ಲಗತ್ತಿಸಿರುವ ನಿಬಂಧನೆಗಳು ಮತ್ತು ಷರತ್ತುಗಳು ಸಹಾ ಚಾಲ್ತಿಯಲ್ಲಿರುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ನರಸಿಂಹಲು**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಕಟ್ಟಡಗಳು).

**ನಿಬಂಧನೆಗಳು**

1) ಸರ್ಕಾರಿ ಅಧಿಕಾರಿಗಳು ಸರ್ಕಾರಿ ಕೆಲಸದ ನಿಮಿತ್ತ ಬಂದರೆ ಅವರಿಗೆ ಮೂರು ದಿನಗಳು ಮಾತ್ರ ತಂಗಲು ಅವಕಾಶವಿದೆ.
2) ಸಾರ್ವಜನಿಕರಿಗೆ ಮುಂಗಡ ಹಣ ಕಟ್ಟಿಸಿಕೊಂಡು ಕಾವೇರಿ ಅತಿಥಿಗೃಹದಲ್ಲಿ ಕೊಠಡಿಯನ್ನು ಕಾಯ್ದಿರಿಸಲು ಕ್ರಮ ತೆಗೆದುಕೊಳ್ಳುವುದು.
3) ಸರ್ಕಾರಿ ಅಧಿಕಾರಿಗಳು ಸರ್ಕಾರಿ ಕೆಲಸದ ಮೇರೆಗೆ ಅತಿಥಿಗೃಹದಲ್ಲಿ ತಂಗಲು ಅರ್ಜಿ ನೀಡುವಾಗ ಅವರ ಮೇಲಾಧಿಕಾರಿಗಳಿಂದ ಹಿಂಬರಹ ಹಾಗೂ ಅತಿಥಿಗೃಹದಲ್ಲಿ ವಾಸ್ತವ್ಯವನ್ನು ಬಯಸುವವರು ಅರ್ಜಿಯಲ್ಲಿ ಅವರ ಹೆಸರು, ಹುದ್ದೆ ಮತ್ತು ಕಛೇರಿಯ ಹೆಸರು ನಮೂದಿಸತಕ್ಕದ್ದು.
4) ಕರ್ತವ್ಯದ ಮೇಲೆ ವಾಸ್ತವ್ಯ ಮಾಡುವ ಸರ್ಕಾರಿ ಅಧಿಕಾರಿಗಳಿಗೆ ಗರಿಷ್ಟ 5 ದಿನಗಳವರೆಗೆ ಸಾಮಾನ್ಯ ಬಾಡಿಗೆಯನ್ನು ನಂತರ ಮೊದಲ ಮೂರು ದಿನಗಳಿಗೆ ಸಾಮಾನ್ಯ ಬಾಡಿಗೆಯ 3 ಪಟ್ಟು ದಂಡ ಬಾಡಿಗೆ ತದನಂತರದ ದಿನಗಳಿಗೆ ಸಾಮಾನ್ಯ ಬಾಡಿಗೆಯ 10 ರಷ್ಟು ದಂಡ ಬಾಡಿಗೆ ವಿಧಿಸತಕ್ಕದ್ದು.
5) ಒಂದು ಕೇಂದ್ರ ಸ್ಥಾನದಿಂದ ಮತ್ತೊಂದು ಕೇಂದ್ರ ಸ್ಥಾನಕ್ಕೆ ವರ್ಗವಾಗಿರುವ ಸರ್ಕಾರಿ ಅಧಿಕಾರಿಗಳಿಗೆ ಗರಿಷ್ಟ 5 ದಿನಗಳವರೆಗೆ ಅತಿಥಿಗೃಹವನ್ನು ಕಾಯ್ದಿರಿಸಬಹುದು.
6) ಶಾಸಕರು ಹಾಗೂ ಸಂಸದರು ತಂಗುವಾಗ ಅವರಿಗೆ ಮತ್ತು ಅವರ ಸಿಬ್ಬಂದಿ ವರ್ಗದವರಿಗೆ ಪರಿಷ್ಕೃತ ಆದೇಶದಲ್ಲಿ ನಿಗದಿಪಡಿಸಿರುವಂತೆ ಬಾಡಿಗೆಯನ್ನು ನಿಗದಿಪಡಿಸುವುದು.
7) ಕೊಠಡಿ ಬಾಡಿಗೆ ದರದಲ್ಲಿ ಊಟ ಉಪಚಾರದ ವೆಚ್ಚ ಒಳಗೊಂಡಿರುವುದಿಲ್ಲ, ಈ ವೆಚ್ಚವನ್ನು ಪ್ರತ್ಯೇಕವಾಗಿ ಬಾಡಿಗೆದಾರರೇ ಭರಿಸಿಕೊಳ್ಳತಕ್ಕದ್ದು.
8) ಕೊಠಡಿಗಳಿಗೆ ದೂರವಾಣಿ ಸೌಲಭ್ಯವನ್ನು ಉಚಿತವಾಗಿ ಒದಗಿಸುವುದಿಲ್ಲ.
9) ಕೊಠಡಿಗಳಲ್ಲಿರುವ ಅನುಕೂಲತೆಗೆ ತಕ್ಕಂತೆ ತಂಗುವವರ ಸಂಖ್ಯೆಯನ್ನು ಸೀಮಿತಗೊಳಿಸಲಾಗುವುದು.
10) ದಿನದ ಬಾಡಿಗೆಯನ್ನು ಆಯಾ ದಿನವೇ ಪಾವತಿಸತಕ್ಕದ್ದು.
11) ಕೊಠಡಿಗಳನ್ನು ತಂಗಲು ಪಡೆದವರು ಕಾಲಮಿತಿಯಿಲ್ಲದೆ ದಿನದ ಸಂಪೂರ್ಣ ಬಾಡಿಗೆಯನ್ನು ಪಾವತಿಸತಕ್ಕದ್ದು.
12) ಸರ್ಕಾರದ ಆಸ್ತಿಪಾಸ್ತಿಗೆ ನಷ್ಟ ಉಂಟು ಮಾಡಿದಲ್ಲಿ ವಾಸಿಗರೇ ಭರಿಸಬೇಕು.

**ಎಂ.ಕೆ. ನರಸಿಂಹಲು**

ಪಿ.ಆರ್. 1422

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಕಟ್ಟಡಗಳು).

## ಸಹಕಾರ ಸಚಿವಾಲಯ

**ವಿಷಯ:** ದಿ. ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಕಾಕತಿ, ಬೆಳಗಾವಿ ಇದರ 2004-05 ಮತ್ತು 2005-06 ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ಮುಂದೂಡುವ ಕುರಿತು - ಆದೇಶ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ ಸಇ 73 ಸಸಕಾ 2006, ದಿನಾಂಕ: 20.3.2006.

2. ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಇವರ ಪತ್ರ ಸಂಖ್ಯೆ ಡಿಎಸ್‌ಕೆ / ಇಎಸ್‌ಟಿಎಸ್ / 53 / 2004-05 ದಿನಾಂಕ: 29.8.06.

**ಪ್ರಸ್ತಾವನೆ :**

ಮೇಲೆ ಓದಲಾದ ಆದೇಶ (1) ರಲ್ಲಿ ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ (ಲಿ) ಕಾಕತಿ, ಇದರ 2004-05 ಮತ್ತು 2005-06 ನೇ ಸಾಲಿನ ಸರ್ವ ಸದಸ್ಯರ ವಾರ್ಷಿಕ ಮಹಾಸಭೆಯನ್ನು ದಿನಾಂಕ: 30.9.2006 ರವರೆಗೆ ಅವಧಿ ವಿಸ್ತರಿಸಲಾಗಿರುತ್ತದೆ. ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಪ್ರಸ್ತಾವನೆಯನ್ನು ಸಲ್ಲಿಸಿ ಕಾರ್ಖಾನೆಯ ಆಡಳಿತ ಮಂಡಳಿಯು ದಿನಾಂಕ: 17.8.2006 ರಂದು ನಡೆದ ಸಭೆಯಲ್ಲಿ ಚರ್ಚಿಸಿದಂತೆ ಸದರಿ ಕಾರ್ಖಾನೆಯಲ್ಲಿ ಹಾಲಿ ಹಣಕಾಸಿನ ತೊಂದರೆ ಇರುವುದರಿಂದ 2004-05 ಹಾಗೂ 2005-06 ನೇ ಸಾಲಿನ ಸರ್ವ ಸದಸ್ಯರ ವಾರ್ಷಿಕ ಮಹಾಸಭೆಯನ್ನು ನಡೆಸಲು ಅನಾನುಕೂಲವಾಗಿರುವುದರಿಂದ ಮಹಾಸಭೆಯ ಅವಧಿಯನ್ನು ದಿನಾಂಕ 31.3.2007 ರವರೆಗೆ ವಿಸ್ತರಿಸುವಂತೆ ಕೋರಿದ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರಿ ಸಂಘಗಳ ಅಧಿನಿಯಮ 1959 ರ ಕಲಂ 121 ರಡಿಯಲ್ಲಿ ಕಾರ್ಖಾನೆಯ ವಾರ್ಷಿಕ ಮಹಾಸಭೆಯ ಅವಧಿಯನ್ನು ದಿನಾಂಕ: 31.3.2007 ರವರೆಗೆ ವಿಸ್ತರಿಸುವಂತೆ ಕೋರಿರುತ್ತಾರೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಇ 202 ಸಸಕಾ 2006, ಬೆಂಗಳೂರು, ದಿನಾಂಕ: 16ನೇ ಸೆಪ್ಟೆಂಬರ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಪ್ರಕರಣ 121 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ (ನಿ), ಕಾಕತಿ, ಬೆಳಗಾಂ ಇದರ 2004-05, 2005-06 ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ: 31.3.2007 ರವರೆಗೆ ಕಾಲಾವಕಾಶ ನೀಡಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ಪ್ರಕರಣ 27 (1) ರ ಉಪಬಂಧಗಳು ಅನ್ವಯವಾಗುತ್ತದೆ ಎಂದು ನಿರ್ದೇಶಿಸುತ್ತದೆ ಎಂದರೆ

**27 ರ ಪ್ರಕರಣದಲ್ಲಿ :**

27ನೇ ಪ್ರಕರಣದ ಉಪ ಪ್ರಕರಣ (1) ಪರಂತುಕದಲ್ಲಿನ ಆರು ತಿಂಗಳು ಎಂಬ ಪದಗಳಿಗೆ ಬದಲಾಗಿ ಹದಿನೆಂಟು ತಿಂಗಳು ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 27(1) ಕ್ಕೆ ಮಾಡಿದ ಮಾರ್ಪಾಡು ದಿನಾಂಕ: 31.3.2007 ರ ವರೆಗೆ ಜಾರಿಯಲ್ಲಿರತಕ್ಕದ್ದು, ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ಕ್ಕೆ ಪ್ರಕರಣದ ಉಪಬಂಧಕಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಾಣದ ರಂಗಪ್ಪ**

ಪಿ.ಆರ್. 1421

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ.

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** 2006-07ನೇ ಸಾಲಿನಲ್ಲಿ ನಿರ್ದೇಶಕರು, ಪರಿಶಿಷ್ಟ ವರ್ಗದ ಕಲ್ಯಾಣ ಇಲಾಖೆ ವ್ಯಾಪ್ತಿಗೆ ಒಳಪಡುವ ಪರಿಶಿಷ್ಟ ವರ್ಗದ ಮೆಟ್ರಿಕ್ ಪೂರ್ವ / ಮೆಟ್ರಿಕ್ ನಂತರದ ಬಾಲಕ / ಬಾಲಕಿಯರ 10 ಹೊಸ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸುವ ಬಗ್ಗೆ ಮಂಜುರಾತಿ ಆದೇಶ.

**ಓದಲಾಗಿದೆ:** 1. 2006-07 ನೇ ಸಾಲಿನ ಆಯವ್ಯಯ ಭಾಷಣದ ಅನ್ವಯ.

2. ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ: ಪವಕನಿ / ಇಡಿ-2, ಸಿಆರ್.-01 / 06-07, ದಿನಾಂಕ: 25.04.2006.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಸಂಖ್ಯೆ (1)ರಲ್ಲಿ 2006-07ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಪರಿಶಿಷ್ಟ ವರ್ಗದ 10 ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸುವುದಾಗಿ ಘೋಷಿಸಿದ್ದು, ಇದರನ್ವಯ ಸಚಿವರುಗಳ ಶಾಸಕರುಗಳಿಂದ ಬಂದಿರುವ ಮನವಿಗಳನ್ನು ಪರಿಶೀಲಿಸಿ ಹಾಗೂ ಅತ್ಯವಶ್ಯಕವಾಗಿ ಬೇಕಾಗಿರುವ 18 ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಲು ಓದಲಾದ ಕ್ರಮಸಂಖ್ಯೆ (2) ರಲ್ಲಿ ಪ್ರಸ್ತಾವನೆ ಸಲ್ಲಿಸಿ, 28 ವಿದ್ಯಾರ್ಥಿನಿಲಯಗಳಿಗೆ ಮಂಜೂರಾತಿ ಕೋರಿರುತ್ತಾರೆ.

ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 220 ಪವಯೋ 2006 (ಭಾ), ಬೆಂಗಳೂರು, ದಿನಾಂಕ: 13ನೇ ಸೆಪ್ಟೆಂಬರ್ 2006**

ಈ ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ 2006-07ನೇ ಸಾಲಿಗೆ ಪರಿಶಿಷ್ಟ ವರ್ಗದ 10 ವಿದ್ಯಾರ್ಥಿನಿಲಯಗಳನ್ನು ಈ ಕೆಳಗೆ ನಮೂದಿಸಿರುವ ಸ್ಥಳಗಳಲ್ಲಿ ಪ್ರಾರಂಭಿಸಲು ಹಾಗೂ ಸದರಿ ಬಾಲಕಿಯರ ವಸತಿನಿಲಯಗಳಿಗೆ ಅಧೀಕ್ಷಕ-1, ಅಡಿಗೆಯವರು-2, ಅಡುಗೆ ಸಹಾಯಕರು-1, ವಾಚಮನ್-1 ರಂತೆ ಹುದ್ದೆಗಳನ್ನು ಸೃಜಿಸಿ ಮಂಜೂರಾತಿ ನೀಡಿದೆ.

| ಕ್ರ. ಸಂ. | ಜಿಲ್ಲೆ / ತಾಲ್ಲೂಕು | ವಿದ್ಯಾರ್ಥಿನಿಲಯ ಮಂಜೂರಾದ ಸ್ಥಳ | ವರ್ಗ |
|---|---|---|---|
| 1. | ಮಾಲೂರು | ಕೊರ್ನಹಳ್ಳಿ | ಬಾಲಕ ಮೆ. ನಂತರ |
| 2. | ಅರಸಿಕೆರೆ | ಕುರುವಂಕ | ಬಾಲಕ ಮೆ. ನಂತರ |
| 3. | ಸುರಪುರ | ಕೂಡೆಕಲ್ | ಬಾಲಕಿ ಮೆ. ನಂತರ |
| 4. | ಪಾವಗಡ | ಪಾವಗಡ | ಬಾಲಕಿ ಮೆ. ನಂತರ |
| 5. | ಸಿರುಗುಪ್ಪ | ಸಿರುಗುಪ್ಪ | ಬಾಲಕಿ ಮೆ. ನಂತರ |
| 6. | ದೇವದುರ್ಗ | ದೇವದುರ್ಗ | ಬಾಲಕ ಮೆ. ನಂತರ |
| 7. | ಗೋಕಾಕ | ಗೋಕಾಕ | ಬಾಲಕ ಮೆ. ನಂತರ |
| 8. | ಧಾರವಾಡ | ಧಾರವಾಡ | ಬಾಲಕ ಮೆ. ನಂತರ |
| 9. | ಸಂಡೂರು | ಸಂಡೂರು ಟೌನ್ | ಬಾಲಕ ಮೆ. ನಂತರ |
| 10. | ಬೆಂಗಳೂರು | ಬೆಂಗಳೂರು ನಗರ | ಬಾಲಕ ಮೆ. ನಂತರ |

ಈ ವೆಚ್ಚವನ್ನು 2006-07ನೇ ಸಾಲಿನ ರಾಜ್ಯವಲಯ ಲೆಕ್ಕಶೀರ್ಷಿಕೆ 2225-02-277-0-35 ವಿದ್ಯಾರ್ಥಿನಿಲಯಗಳನ್ನು ತೆರೆಯಲು (ಯೋಜನೆ) ಕಾರ್ಯಕ್ರಮದಡಿ ಒದಗಿಸಿರುವ ಅನುದಾನದಲ್ಲಿ ಭರಿಸಬಹುದಾಗಿದ್ದು, ಸದರಿ ವಿದ್ಯಾರ್ಥಿನಿಲಯಗಳು ಸ್ಥಾಪನೆಯಾದ ನಂತರ ಹಣ ಬಿಡುಗಡೆಗಾಗಿ ಸರ್ಕಾರಕ್ಕೆ ಪ್ರತ್ಯೇಕ ಪ್ರಸ್ತಾವನೆ ಕಳುಹಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 340 ವೆಚ್ಚ-3 2006 ದಿನಾಂಕ: 17/ 19.8.2006 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಂ. ಚಿದಾನಂದಸ್ವಾಮಿ**

ಸರ್ಕಾರದ ಉಪ ಕಾರ್ಯದರ್ಶಿ (ಪ್ರಭಾರ),

ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 1430

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಮೈಸೂರು ಸಕ್ಕರೆ ಕಾರ್ಖಾನೆ (ನಿ) ಇದರ ಪುನರುಜ್ಜೀವನಕ್ಕೆ ಸರ್ಕಾರದಿಂದ ಆರ್ಥಿಕ ನೆರವು - ದುಡಿಯುವ ಬಂಡವಾಳ ಬಿಡುಗಡೆ ಬಗ್ಗೆ ಆಡಳಿತಾತ್ಮಕ ಆದೇಶ.

**ಓದಲಾಗಿದೆ :**

1) ಸರ್ಕಾರಿ ಆದೇಶ ಸಂಖ್ಯೆ: ಸಿಐ 202 ಎಸ್‌ಜಿಎಫ್ 04 ದಿ: 06.05.2005
2) ಸರ್ಕಾರಿ ಆದೇಶ ಸಂಖ್ಯೆ: ಸಿಐ 153 ಎಸ್‌ಜಿಎಫ್ 05 ದಿ: 24.08.2005
3) ಸರ್ಕಾರಿ ಆದೇಶ ಸಂಖ್ಯೆ: ಸಿಐ 34 ಎಸ್‌ಜಿಎಫ್ 05 ದಿ; 06.10.05
4) ಸರ್ಕಾರಿ ಆದೇಶ ಸಂಖ್ಯೆ: ಸಿಐ 34 ಎಸ್‌ಜಿಎಫ್ 05 ದಿ: 25.11.05
5) ವ್ಯವಸ್ಥಾಪಕರ ನಿರ್ದೇಶಕರು ಮೈಸೂರು ಸಕ್ಕರೆ ಕಾರ್ಖಾನೆ ರವರ ಪತ್ರ ಸಂಖ್ಯೆ: ಎಂಎಸ್‌ಸಿಓ / 05 / ಎಂಡಿ / (ಬಿಐಎಫ್‌ಆರ್) / 338 ದಿ: 19.12.05.
6) ಸರ್ಕಾರದ ಆದೇಶ ಸಂಖ್ಯೆ: ಸಿಐ 34 ಎಸ್‌ಜಿಎಫ್ 05 ದಿ: 03.08.06.
7) ವ್ಯವಸ್ಥಾಪಕ ನಿರ್ದೇಶಕರು ಮೈಸೂರು ಸಕ್ಕರೆ ಕಾರ್ಖಾನೆ ರವರ ಪತ್ರ ಸಂಖ್ಯೆ: ಎಂಎಸ್‌ಸಿಓ / 06 / ಎಂಡಿ / (ಬಿಐಎಫ್‌ಆರ್) / 537 ದಿ: 22.08.06.

**ಪ್ರಸ್ತಾವನೆ :**

ಮೇಲೆ ಓದಲಾದ 1 ರಿಂದ 4 ರಲ್ಲಿರುವ ಸರ್ಕಾರದ ಆದೇಶಗಳಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ (ನಿ) ಮಂಡ್ಯ, ಈ ಕಾರ್ಖಾನೆಗೆ 2005-06 ನೇ ಸಾಲಿಗೆ ತನ್ನ ಕಬ್ಬು ಅರೆಯುವ ಚಟುವಟಿಕೆಗಾಗಿ 25,52,27,000/- ರೂಗಳ ದುಡಿಯುವ ಬಂಡವಾಳವನ್ನು ಸಾಲವಾಗಿ ಸರ್ಕಾರವು ಬಿಡುಗಡೆ ಮಾಡಿದೆ.

ಮೇಲೆ ಓದಲಾದ (5)ರಲ್ಲಿರುವ ವ್ಯವಸ್ಥಾಪಕ ನಿರ್ದೇಶಕರು ಮೈಸೂರು ಸಕ್ಕರೆ ಕಾರ್ಖಾನೆ ರವರ ಪತ್ರದಲ್ಲಿ ಕಾರ್ಖಾನೆಯನ್ನು ಪುನಃಶ್ಚೇತನ ಗೊಳಿಸುವ ಸಲುವಾಗಿ 2006-07 ನೇ ಸಾಲಿಗೆ ಕಾರ್ಖಾನೆಯ ಕಬ್ಬು ಅರೆಯುವ ಕಾರ್ಯಕ್ಕಾಗಿ 36.30 ಕೋಟಿ ರೂ.ಗಳನ್ನು ದುಡಿಯುವ ಬಂಡವಾಳವಾಗಿ ಮಂಜೂರು ಮಾಡಬೇಕೆಂದು ಸರ್ಕಾರವನ್ನು ಕೋರಿರುತ್ತಾರೆ.

ಮೇಲೆ ಓದಲಾದ (6)ರಲ್ಲಿರುವ ಸರ್ಕಾರದ ಆದೇಶದಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ (ನಿ), ಮಂಡ್ಯ ಈ ಕಾರ್ಖಾನೆಗೆ 2006-07ನೇ ಸಾಲಿನಲ್ಲಿ ಕಬ್ಬು ಅರೆಯುವ ಕಾರ್ಯಕ್ರಮಗಳನ್ನು ಪ್ರಾರಂಭಿಸುವ ಸಲುವಾಗಿ ದುಡಿಯುವ ಬಂಡವಾಳವಾಗಿ ಮೊದಲನೆ ಕಂತು 5 ಕೋಟಿ ರೂಗಳನ್ನು ಸಾಲವಾಗಿ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (7) ರಲ್ಲಿರುವ ವ್ಯವಸ್ಥಾಪಕ ನಿರ್ದೇಶಕರು ಮೈಸೂರು ಸಕ್ಕರೆ ಕಾರ್ಖಾನೆ ರವರ ಪತ್ರದಲ್ಲಿ 2006-07ನೇ ಸಾಲಿನ ಕಬ್ಬು ಅರೆಯುವ ಕಾರ್ಯಕ್ರಮಕ್ಕಾಗಿ ದುಡಿಯುವ ಬಂಡವಾಳ ರೂ. 15 ಕೋಟಿಗಳನ್ನು 3 ಕಂತುಗಳಲ್ಲಿ ಬಿಡುಗಡೆ ಮಾಡಲು ಕೋರಿರುತ್ತಾರೆ.

ವಿಷಯವನ್ನು ಕೂಲಂಕುಷವಾಗಿ ಪರಿಶೀಲಿಸಿ 2006-07ನೇ ಸಾಲಿನ ಕಬ್ಬು ಅರೆಯುವ ಕಾರ್ಯಕ್ರಮಗಳಿಗಾಗಿ ಎರಡನೇ ಕಂಡು 5.00 ಕೋಟಿ ರೂ.ಗಳ ದುಡಿಯುವ ಬಂಡವಾಳವನ್ನು ಸಾಲವಾಗಿ ಬಿಡುಗಡೆಗೊಳಿಸಲು ಈ ಕೆಳಕಂಡಂತೆ ಆಡಳಿತಾತ್ಮಕ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 34 ಎಸ್‌ಜಿಎಫ್ 2005, ದಿನಾಂಕ: 23ನೇ ಸೆಪ್ಟೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ (ನಿ), ಮಂಡ್ಯ ಈ ಕಾರ್ಖಾನೆಗೆ 2006-07 ನೇ ಸಾಲಿನ ಕಬ್ಬು ಅರೆಯುವ ಕಾರ್ಯಕ್ರಮಗಳನ್ನು ಪ್ರಾರಂಭಿಸುವ ಸಲುವಾಗಿ ದುಡಿಯುವ ಬಂಡವಾಳವಾಗಿ ಎರಡನೇ ಕಂತು 5.00 ಕೋಟಿ ರೂಗಳನ್ನು (ರೂ. ಐದು ಕೋಟಿ ರೂಗಳು ಮಾತ್ರ) ಸಾಲವಾಗಿ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2006-07ನೇ ಸಾಲಿನ ಅನುದಾನದಲ್ಲಿ ಇದಕ್ಕಾಗಿ ಯಾವುದೇ ಹಣವನ್ನು ಒದಗಿಸಿರುವುದಿಲ್ಲ. ಆದುದರಿಂದ ಮೊದಲಿಗೆ ಈ ಹಣವನ್ನು ಸಾದಿಲ್ವಾರು ನಿಧಿ ಲೆಕ್ಕ ಶೀರ್ಷಿಕೆ "8000-00-673-0-00 ಕೈಗಾರಿಕೆಗಳು" ಇದರಡಿ ಲೆಕ್ಕ ಶೀರ್ಷಿಕೆ 6860-04-190-2-01-395 (ಪಿ) ಸಾರ್ವಜನಿಕ ಉದ್ದಿಮೆಗಳಿಗೆ ಮತ್ತು ಸ್ಥಳೀಯ ಸಂಸ್ಥೆಗಳಿಗೆ ಸಾಲಗಳು ಇದರಿಂದ ಬಿಡುಗಡೆಗೆ ಮಂಜೂರು ಮಾಡಲಾಗಿದೆ.

ಸಾದಿಲ್ವಾರು ನಿಧಿಯಿಂದ ಈ ಹಣವನ್ನು ಬಿಡುಗಡೆಗೊಳಿಸಲು ಆರ್ಥಿಕ ಇಲಾಖೆಯು ಪ್ರತ್ಯೇಕ ಆದೇಶವನ್ನು ಹೊರಡಿಸಲಿದೆ. ಆ ನಂತರವೇ ಹಣ ಬಿಡುಗಡೆಗೆ ಕ್ರಮವಹಿಸಬೇಕು. ಹಣ ಸೆಳೆಯುವ ಅಧಿಕಾರಿಯವರು ಸಾದಿಲ್ವಾರು ನಿಧಿಯಿಂದ ಹಣ ಸೆಳೆಯಲು ಬಿಲ್ಲನ್ನು ಆರ್ಥಿಕ ಇಲಾಖೆಯಿಂದ ಹೊರಡಿಸುವ ಪ್ರತ್ಯೇಕ ಆದೇಶವನ್ನು ಈ ಆದೇಶದೊಂದಿಗೆ ಲಗತ್ತಿಸಿ, ಖಜಾನೆಗೆ ಸಲ್ಲಿಸಿದ ನಂತರ ಹಣ ಬಿಡುಗಡೆಗೆ ಖಜಾನೆ ಕ್ರಮವಹಿಸುವುದು.

ಹಣ ಸೆಳೆಯುವ ಅಧಿಕಾರಿಯು ಸಹಾಯಕ ನಿರ್ದೇಶಕರು (ಹೆಚ್.ಆರ್.ಡಿ ಆಡಳಿತ ಮತ್ತು ಇಎಂ) ಜಿಲ್ಲಾ ಕೈಗಾರಿಕಾ ಕೇಂದ್ರ ಮಂಡ್ಯ ಆಗಿದ್ದು ಸದರಿಯವರು ಹಣ ಸೆಳೆಯುವ ಬಿಲ್ಲನ್ನು ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಇವರ ಮೇಲು ಸಹಿಯೊಂದಿಗೆ ಖಜಾನೆಗೆ ಸಲ್ಲಿಸಬೇಕು.

ಸದರಿ ಸಾಲದ ಹಣದ ಮರುಪಾವತಿ ಹಾಗೂ ಇನ್ನಿತರೇ ಅಂಶಗಳು, ಷರತ್ತು ಹಾಗೂ ನಿಬಂಧನೆಗಳ ಬಗ್ಗೆ ಪ್ರತ್ಯೇಕ ಆದೇಶವನ್ನು ನಂತರ ಹೊರಡಿಸಲಾಗಿರುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1667 ವೆಚ್ಚ-1 / 06 ದಿನಾಂಕ: 22.09.2006 ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1434

...............

ಪೀಠಾಧಿಕಾರಿ (ಸಕ್ಕರೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## INFRASTRUCTURE DEVELOPMENT SECRETARIAT

**Sub :** Contruction of Road over / under Bridges (RoB/RuB) in Karnataka - reg.

**Read :**
1) G.O. No. IDD 26 NSW 2003 dated 31.03.2003.
2) G.O. No. IDD 13 NSW 2001 dated 26.07.2003
3) G.O. No. IDD 122 NSW 2002 dated 14.08.2003.
4) G.O. No. IDD 100 NSW 2003 dated 07.07.2005.
5) Proceedings of the meeting of Steering Committee on Construction of RoBs/RuBs in the State held on 07-09-2006 under the Chairmanship of PRS to Govt., IDD.

**Preamble:**

In the G.O. read at Sl. No. (1) above, Government had sanctioned the new plan scheme for the construction of 12 Road over / under Bridges in the State. The details of RoB/Rub were set out in the Annexure-I of the G.o. Further, in the Government Orders read at Sl. No. (2) to (4) above, 11 more RoBs/RuBs have been indicated in the list of the scheme for construction.

2. In prusuance of the Steering Committee meeting on the construction of RoB/RuB in Karnataka held on 07-09-2006 read at Sl. No. (5) above, it was decided to include the proposal for taking up of the construction of RoB/RuB in lieu of the following level crossings in the priority list for 2006-07. Hence the following order.

**Government Order No.IDD 65 NSW 2004, BANGALORE, DATED: 20th September 2006.**

In partial modification of Government Order No. IDD 26 NSW 2003 dated 31.3.2003 and in continuation of Government Order No. IDD 13 NSW 2001 dated 26.07.2003, sanction is accorded to include the following level crossing in the Annexure-I of the said Government Order to take up the construction of RoB/RuB during 2006-07 subject to the guidelines / scheme set out in the said Government Order.

| | |
|---|---|
| 1. L.C. No. 110 | ROB - Bellary |
| 2. L.C. No. 388-A | ROB - Belgaum |
| 3. L.C. No. 3 | ROB - Mysore - Chamarajanagar |
| 4. L.C. No. 1 | ROB - Mysore - Charmarajanagar |

By Order and in the name of the Governor of Karnataka,

**N. Manjula Geetha**

P.R. 1435

Under Secretary to Government,
Infrastructure Development Department.

## ಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯಡಿಯಲ್ಲಿ ಮಾರ್ಗಸೂಚಿಯನ್ನು ಹೊರಡಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ: ಯೋಇ 40 ಪಿಎಂಎಂ 2005 ದಿನಾಂಕ: 15.3.2006.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ: 15.3.2006ರ ಸರ್ಕಾರಿ ಆದೇಶದಲ್ಲಿ ಸರ್ಕಾರವು ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯನ್ನು ಅನುಷ್ಠಾನಗೊಳಿಸಲು ಮಾರ್ಗ ಸೂಚಿಯನ್ನು ಹೊರಡಿಸಲಾಗಿರುತ್ತದೆ.

ಉನ್ನತ ಶಿಕ್ಷಣ ಸಂಸ್ಥೆಗಳಾದ ವಿಶ್ವವಿದ್ಯಾನಿಲಯಗಳ ಹಾಗೂ ವನ್ಯಮೃಗದಾಮ [Zoo] ಗಳ ಮೂಲಭೂತ ಸೌಕರ್ಯಗಳ ಅಭಿವೃದ್ದಿಗೆ ಅನುದಾನದ ಕೊರತೆ ಇರುವ ಹಿನ್ನೆಲೆಯಲ್ಲಿ ಸಮಾಜದ ಸರ್ವತೋಮುಖ ಅಭಿವೃದ್ದಿಗೆ ಸ್ವಲ್ಪ ಪ್ರಮಾಣದ ಅನುದಾನವನ್ನು ಶಾಸಕರ ಪ್ರದೇಶಾಭಿವೃದ್ದಿ ಯೋಜನೆಯಡಿ ಎಲ್ಲಾ ಶಾಸಕರಿಂದ ಅವರವರ ಭಾಗದ ವಿಶ್ವವಿದ್ಯಾನಿಲಯಗಳ ಹಾಗೂ ವನ್ಯ ಮೃಗಗಳ ಮೂಲಭೂತ ಸೌಕರ್ಯಗಳ ಅಭಿವೃದ್ದಿಗಾಗಿ ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯಡಿ ಕೈಗೊಳ್ಳಬಹುದಾದ ಕಾಮಗಾರಿಗಳ ಪಟ್ಟಿಗೆ ಸೇರಿಸುವುದು ಸಮಂಜಸವೆಂದು ಸರ್ಕಾರವು ಪರಿಗಣಿಸಿದೆ. ಆದುದರಿಂದ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಯೋಇ 23 ಹೈಕಮಂ 2006, ಬೆಂಗಳೂರು, ದಿನಾಂಕ: 12ನೇ ಸೆಪ್ಟೆಂಬರ್ 2006**

ಕರ್ನಾಟಕ ರಾಜ್ಯ ಶಾಸಕರ ಪ್ರದೇಶಾಭಿವೃದ್ದಿ ಯೋಜನೆಯಡಿಯಲ್ಲಿ ತೆಗೆದುಕೊಳ್ಳಬಹುದಾದ ಕಾರ್ಯಕ್ರಮಗಳ ಪಟ್ಟಿಗೆ ಈ ಕೆಳಕಂಡ ಕ್ಷೇತ್ರದ ಕಾಮಗಾರಿಯನ್ನು ಈ ಯೋಜನೆಯಡಿಯಲ್ಲಿ ಅನುಷ್ಠಾನಗೊಳಿಸಲು ಸರ್ಕಾರವು ಆದೇಶಿಸಿದೆ.

1) ಉನ್ನತ ಶಿಕ್ಷಣ ಸಂಸ್ಥೆಗಳಾದ ವಿಶ್ವವಿದ್ಯಾನಿಲಯಗಳ ಮೂಲಭೂತ ಸೌಕರ್ಯ ಅಭಿವೃದ್ಧಿ ಕಾಮಗಾರಿಯನ್ನು ಕೈಗೊಳ್ಳಬಹುದು. (ನಿರ್ವಹಣಾ ವೆಚ್ಚ ಹೊರತುಪಡಿಸಿ)

2) ವನ್ಯ ಮೃಗಧಾಮ [ZOO] ಗಳ ಮೂಲಭೂತ ಸೌಕರ್ಯ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಬಹುದು. (ನಿರ್ವಹಣಾ ವೆಚ್ಚ ಹೊರತುಪಡಿಸಿ)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1401

**ಆರ್. ಶಿವಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಶ್ರೀಮತಿ ಎನ್.ಎಸ್. ಸುಧಾ, ಕಿರಿಯ ಇಂಜಿನಿಯರ್, ಸಣ್ಣ ನೀರಾವರಿ ಉಪ ವಿಭಾಗ, ಬೆಂಗಳೂರು ಇವರನ್ನು ಕಿರಿಯ ಇಂಜಿನಿಯರ್ ಹುದ್ದೆಯಿಂದ ಸಹಾಯಕ ಇಂಜಿನಿಯರ್, ಹುದ್ದೆಗೆ ವರ್ಗಾಯಿಸಿ ನೇಮಿಸುವ ಬಗ್ಗೆ.

**ಓದಲಾಗಿದೆ :** 1) ಪ್ರಧಾನ ಇಂಜಿನಿಯರ್, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಜಸಅ 41 ಇಎಸ್‌ಎಲ್ 06 ದಿನಾಂಕ:27.7.2006.

**ಪ್ರಸ್ತಾವನೆ :**

ಪ್ರಧಾನ ಇಂಜಿನಿಯರ್, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು ಇವರು ಮೇಲೆ ಓದಲಾದ ದಿನಾಂಕ:27.7.06ರ ಪತ್ರದಲ್ಲಿ ಶ್ರೀಮತಿ ಎನ್.ಎಸ್. ಸುಧಾ, ಕಿರಿಯ ಇಂಜಿನಿಯರ್, ಸಣ್ಣ ನೀರಾವರಿ ಉಪ ವಿಭಾಗ, ಬೆಂಗಳೂರು ಇವರು ಸಹಾಯಕ ಇಂಜಿನಿಯರ್, ಮತ್ತು ಕಿರಿಯ ಇಂಜಿನಿಯರ್ ಹುದ್ದೆಗಳ ಆಯ್ಕೆ ಪ್ರಾಧಿಕಾರ ಹಾಗೂ ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆಯಿಂದ ಕಿರಿಯ ಇಂಜಿನಿಯರ್ ಹುದ್ದೆಗೆ ಆಯ್ಕೆ ಹೊಂದಿ ದಿ:31.7.03 ರಂದು ಕರ್ತವ್ಯಕ್ಕೆ ಹಾಜರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇವರು ಕೆಲಸಕ್ಕೆ ಸೇರುವ ಪೂರ್ವದಲ್ಲಿಯೇ ಬಿ.ಇ. ವ್ಯಾಸಂಗ ಮಾಡುತ್ತಿದ್ದು, ಕೆಲಸಕ್ಕೆ ಸೇರಿದ ನಂತರ ಸರ್ಕಾರದ ಅನುಮತಿ ಪಡೆದು ವ್ಯಾಸಂಗ ಮುಂದುವರಿಸಿ, ಬಿ.ಇ (ಸಿವಿಲ್) ಪದವಿಯನ್ನು ದಿ:8.12.05 ರಂದು ಪಡೆದುಕೊಂಡಿರುತ್ತಾರೆ. ಇವರು ಕಿರಿಯ ಇಂಜಿನಿಯರ್ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿದ್ದು, ಪರೀಕ್ಷಾರ್ಥ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆ. ಬಿ.ಇ. ವಿದ್ಯಾರ್ಹತೆ ಹೊಂದಿರುವ ಕಿರಿಯ ಇಂಜಿನಿಯರುಗಳನ್ನು ಸಹಾಯಕ ಇಂಜಿನಿಯರ್ ಹುದ್ದೆಗೆ ವರ್ಗಾಯಿಸಿ ನೇಮಿಸಲು ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅವಕಾಶವಿರುವುದರಿಂದ ಹಾಗೂ ಸದರಿ ನಿಯಮಗಳಲ್ಲಿನ ಎಲ್ಲಾ ಷರತ್ತುಗಳನ್ನು ಪೂರೈಸಿರುವುದರಿಂದ ಶ್ರೀಮತಿಯವರನ್ನು ಕಿರಿಯ ಇಂಜಿನಿಯರ್ ಹುದ್ದೆಯಿಂದ ಸಹಾಯಕ ಇಂಜಿನಿಯರ್ ಹುದ್ದೆಗೆ ವರ್ಗಾಯಿಸಿ ನೇಮಿಸುವಂತೆ ಮೇಲೆ ಓದಲಾದ ಪ್ರಧಾನ ಅಭಿಯಂತರರ ಪತ್ರದಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಧಾನ ಇಂಜಿನಿಯರ್, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರುರವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿಲಾಗಿದ್ದು, ಶ್ರೀಮತಿ ಎನ್.ಎಸ್. ಸುಧಾ, ಇವರನ್ನು ಕಿರಿಯ ಇಂಜಿನಿಯರ್, ಹುದ್ದೆಯಿಂದ ಸಹಾಯಕ ಇಂಜಿಯರ್ ಹುದ್ದೆಗೆ ವರ್ಗಾಯಿಸಿ ನೇಮಿಸಲು ಸರ್ಕಾರವು ನಿರ್ಧರಿಸಿದೆ. ಅದರಂತೆ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 55 ಸೇಸಕಿ 2006, ಬೆಂಗಳೂರು, ದಿನಾಂಕ: 17ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀಮತಿ ಎನ್.ಎಸ್. ಸುಧಾ, ಕಿರಿಯ ಂಜಿನಿಯರ್, ಇವರನ್ನು ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿನ ನಿಬಂಧನೆಗಳಿಗೊಳಪಡಿಸಿ, ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಕಿರಿಯ ಇಂಜಿನಿಯರ್ ಹುದ್ದೆಯಿಂದ ಸಹಾಯಕ ಇಂಜಿನಿಯರ್ ಹುದ್ದೆಗೆ ವರ್ಗಾಯಿಸಿ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1514

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಪಶುಸಂಗೋಪನೆ ಸಚಿವರ ಆಪ್ತ ಶಾಖೆಯಲ್ಲಿನ ಒಂದು ಗ್ರೂಪ್ 'ಸಿ' ಹುದ್ದೆಯನ್ನು ಗ್ರೂಪ್ 'ಎ' ಹುದ್ದೆಗೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ :** ಪಶುಸಂಗೋಪನೆ ಸಚಿವರ ಟಿಪ್ಪಣಿ ಸಂಖ್ಯೆ:ಪಸಂಸ:ಟಿ:169:2006, ದಿನಾಂಕ:12.7.2006.

**ಪ್ರಸ್ತಾವನೆ :**

ಮೇಲೆ ಓದಲಾದ ಟಿಪ್ಪಣಿಯಲ್ಲಿ ಮಾನ್ಯ ಪಸುಸಂಗೋಪನೆ ಸಚಿವರು ಶ್ರೀ ವಿಜಯಕುಮಾರ ಉಪ್ಪಿನ, ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ, ಪ್ರಧಾನ ಕಛೇರಿ, ಬೆಂಗಳೂರು ಇವರನ್ನು 12.7.2006 ರಿಂದ ಜಾರಿಗೆ ಬರುವಂತೆ ಅವರ ವಿಶೇಷ ಕರ್ತವ್ಯಾಧಿಕಾರಿಯಾಗಿ ನಿಯೋಜನೆ ಮೇಲೆ ನೇಮಿಸುವಂತೆ ಕೋರಲಾಗಿದೆ. ಈ ವಿಷಯವನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 338 ಸಆಸೇ 2006, ಬೆಂಗಳೂರು, ದಿನಾಂಕ: 5ನೇ ಅಕ್ಟೋಬರ್ 2006**

ಮಾನ್ಯ ಪಶುಸಂಗೋಪನೆ ಸಚಿವರ ಆಪ್ತ ಶಾಖೆಯಲ್ಲಿ ಶ್ರೀ ವಿಜಯಕುಮಾರ ಉಪ್ಪಿನ, ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ, ಪ್ರಧಾನ ಕಛೇರಿ, ಬೆಂಗಳೂರು ಅವರನ್ನು ಸಚಿವರ ವಿಶೇಷ ಕರ್ತವ್ಯಾಧಿಕಾರಿಯಾಗಿ ನಿಯೋಜನೆ ಮೇಲೆ ನೇಮಿಸಲು ದಿನಾಂಕ: 12.7.2006 ರಿಂದ ಜಾರಿಗೆ ಬರುವಂತೆ ಹಾಗೂ ಸಚಿವರ ಪದಾವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಪಶುಸಂಗೋಪನೆ ಸಚಿವರ ಆಪ್ತ ಶಾಖೆಗೆ ಮಂಜೂರಾದ ಒಂದು ಗ್ರೂಪ್ 'ಸಿ' ಹುದ್ದೆಯನ್ನು ಗ್ರೂಪ್ 'ಎ' ಹುದ್ದೆಗೆ ಉನ್ನತೀಕರಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1654 ವೆಚ್ಚ-5/2006, ದಿನಾಂಕ: 23.9.2006 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ ಭಂಡಾರಿ**

ಪಿ.ಆರ್. 1483

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಆರ್ಥಿಕ ಇಲಾಖೆಯ ಕಂಟ್ರೋಲರ್ (ಲೆಕ್ಕಪತ್ರ ನಿರ್ವಹಣೆ) ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ ಹುದ್ದೆಯನ್ನು ಒಳಗೊಂಡಂತೆ ಸದರಿ ಕಛೇರಿಗೆ ಸೃಜಿಸಲಾದ ಹುದ್ದೆಗಳನ್ನು ಖಾಯಂಗೊಳಿಸಲು ಮತ್ತು ಅವರ ಆಪ್ತ ಶಾಖೆಗೆ ಸೃಜಿಸಿದ ಹುದ್ದೆಗಳ ಅವಧಿಯನ್ನು ಮುಂದುವರಿಸುವ ಕುರಿತು.

**ಓದಲಾಗಿದೆ :** ಕಡತ ಸಂಖ್ಯೆ: ಎಫ್‌ಡಿ 2 ಸಿಎಎಂ 2006.

**ಪ್ರಸ್ತಾವನೆ :**

ಮೇಲೆ ಓದಲಾದ ಕಡತದಲ್ಲಿ ಆರ್ಥಿಕ ಇಲಾಖೆಯು ಸದರಿ ಇಲಾಖೆಯ ಲೆಕ್ಕಪತ್ರ ನಿರ್ವಹಣೆಗೆ ಸೃಜಿಸಲಾದ ಕಂಟ್ರೋಲರ್ (ಲೆಕ್ಕಪತ್ರ ನಿರ್ವಹಣೆ) ಹಾಗೂ ಪದನಿಮಿತ್ತ ಕಾರ್ಯದರ್ಶಿ ಹುದ್ದೆಯನ್ನು ಒಳಗೊಂಡಂತೆ ಲೆಕ್ಕಪತ್ರ ನಿರ್ವಹಣೆ ಕಛೇರಿಗೆ ಸೃಜಿಸಲಾದ ಹುದ್ದೆಗಳ ಅವಧಿಯು 5 ವರ್ಷಗಳು ಪೂರೈಸಿದೆಯೆಂದು ತಿಳಿಸಿ, ಅವುಗಳನ್ನು ಖಾಯಂಗೊಳಿಸಲು ಸಮರ್ಥನೆ ನೀಡಿ, ಸದರಿ ಹುದ್ದೆಗಳನ್ನು ಖಾಯಂಗೊಳಿಸುವಂತೆ ಕೋರಿರುತ್ತಾರೆ. ಹಾಗೆಯೇ ನಿಯಂತ್ರಕರು, ಲೆಕ್ಕಪತ್ರ ನಿರ್ವಹಣೆ ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿಯವರ ಆಪ್ತ ಶಾಖೆಗೆ ಪೂರಕ ಸಿಬ್ಬಂದಿಯನ್ನು ಸೃಜಿಸಿ, ಆದೇಶ ಸಂಖ್ಯೆ: ಸಿಆಸುಇ 76 ಸಸಿವಿ 2004, ದಿನಾಂಕ: 4.10.2004ರಲ್ಲಿ ಕೊನೆಯದಾಗಿ ಮುಂದುವರಿಸಿದ ಅವಧಿಯು ದಿನಾಂಕ: 4.11.2006 ರಂದು ಮುಕ್ತಾಯವಾಗುವುದರಿಂದ, ಸದರಿ ಹುದ್ದೆಗಳ ಅವಧಿಯನ್ನು ದಿನಾಂಕ: 5.11.2006 ರಿಂದ ಒಂದು ವರ್ಷದ ಅವಧಿಗೆ ನವೀಕರಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 71 ಸಸಿವಿ 2006, ಬೆಂಗಳೂರು, ದಿನಾಂಕ: 26ನೇ ಸೆಪ್ಟೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಲೆಕ್ಕಪತ್ರ ನಿರ್ವಹಣೆಗೆ ಆದೇಶ ಸಂಖ್ಯೆ: ಡಿಪಿಎಆರ್ 45 ಎಸ್‌ಜಿಬಿ 2000, ದಿನಾಂಕ: 30.3.2001 ಮತ್ತು 4.5.2001ರ ಆದೇಶಗಳಲ್ಲಿ ಸೃಜಿಸಿ ತದನಂತರ ವಿವಿಧ ಸರ್ಕಾರದ ಆದೇಶಗಳಲ್ಲಿ ಮುಂದುವರಿಸಿರುವ ಈ ಕೆಳಕಂಡ ಹುದ್ದೆಗಳನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ಖಾಯಂಗೊಳಿಸಿದೆ.

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ನಿಯಂತ್ರಕರು (ಲೆಕ್ಕಪತ್ರ ನಿರ್ವಹಣೆ) ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ | 01 |
| 2. | ಜಂಟಿ ನಿಯಂತ್ರಕರು (ಲೆಕ್ಕಪತ್ರ ನಿರ್ವಣೆ) ಈಗ ಅಪರ ನಿಯಂತ್ರಕರು | 01 |
| 3. | ಅಕೌಂಟ್ಸ್ ಸೂಪರಿಂಟೆಂಡೆಂಟ್ | 01 |
| 4. | ಶೀಘ್ರಲಿಪಿಗಾರರು | 01 |
| 5. | ಗ್ರೂಪ್ 'ಡಿ' | 01 |

ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 76 ಸಸಿವಿ 2004, ದಿನಾಂಕ: 4.10.2004ರ ಆದೇಶದಲ್ಲಿ ಮುಂದುವರಿಸಿರುವ ಈ ಕೆಳಕಂಡ ಹುದ್ದೆಗಳ ಅವಧಿಯು ದಿನಾಂಕ: 4.11.2006ರಂದು ಕೊನೆಗೊಳ್ಳುವುದರಿಂದ, ಸದರಿ ಹುದ್ದೆಗಳ ಅವಧಿಯನ್ನು ದಿನಾಂಕ: 5.11.2006 ರಿಂದ ಜಾರಿಗೆ ಬರುರಂತೆ ಮತ್ತೊಂದು ವರ್ಷದ ಅವಧಿಗೆ ನವೀಕರಿಸಲಾಗಿದೆ.

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಪತ್ರಾಂಕಿತ ಆಪ್ತ ಸಹಾಯಕರು | 01 |
| 2. | ಕಿರಿಯ ಸಹಾಯಕರು | 01 |
| 3. | ದಲಾಯತ್ | 01 |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996ರಲ್ಲಿ ನೀಡಿರುವ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1441

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

**ವಿಷಯ :** ಮಾನ್ಯಮುಖ್ಯಮಂತ್ರಿಗಳ ಸಚಿವಾಲಯದ ಕಾರ್ಯಾರಂಭ ಮಾಡಿರುವ 'ಜನತಾ ದರ್ಶನ ಘಟಕಕ್ಕೆ' (ವಿಕಾಸಸೌಧ) ಸಿಬ್ಬಂದಿ ಮಂಜೂರು ಮಾಡುವ ಕುರಿತು.

**ಓದಲಾಗಿದೆ :** ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ: ಸಿಎಂ/85/ಜೆಎಎಂ/2006, ದಿನಾಂಕ: 4.9.2006.

**ಪ್ರಸ್ತಾವನೆ :**

ಮೇಲೆ ಓದಲಾದ ಟಿಪ್ಪಣಿಯಲ್ಲಿ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರು ವಿಕಾಸಸೌಧದ ಮುಖ್ಯಮಂತ್ರಿಗಳ ಸಚಿವಾಲಯದಲ್ಲಿ ಕಾರ್ಯಾರಂಭ ಮಾಡಿರುವ 'ಜನತಾ ದರ್ಶನ ಘಟಕ' (ವಿಕಾಸಸೌಧ)ಕ್ಕೆ ಒಂದು ಗ್ರೂಪ್-ಬಿ ಹುದ್ದೆ, 10 ಗ್ರೂಪ್-ಸಿ ಹುದ್ದೆ, 2 ಗ್ರೂಪ್-ಡಿ ಹುದ್ದೆ ಮತ್ತು ಒಂದು ಮೋಟಾರ್ ಸೈಕಲ್ ಆರ್ಡರ್ಲಿ ಹುದ್ದೆಗಳನ್ನು ದಿನಾಂಕ:1.6.2006 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡುವಂತೆ ಕೋರಿರುತ್ತಾರೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 28 ಸಸಿವಿ 2006, ಬೆಂಗಳೂರು, ದಿನಾಂಕ: 29ನೇ ಸೆಪ್ಟೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಜನಸ್ಪಂದನಾ ಕೋಶಕ್ಕೆ ಮಂಜೂರಾಗಿರುವ ಒಟ್ಟು 45 ಹುದ್ದೆಗಳ ಪೈಕಿ, ಖಾಲಿ ಇರುವ ಈ ಕೆಳಕಂಡ 13 ಹುದ್ದೆಗಳನ್ನು ವಿಕಾಸಸೌಧದಲ್ಲಿ ಕಾರ್ಯಾರಂಭ ಮಾಡಿರುವ ಮಾನ್ಯ ಮುಖ್ಯಮಂತ್ರಿಗಳ ಸಚಿವಾಲಯದ ಜನತಾ ದರ್ಶನ ಘಟಕಕ್ಕೆ ದಿನಾಂಕ:1.6.2006 ರಿಂದ ಜಾರಿಗೆ ಬರುವಂತೆ

ಹಾಗೂ ಮುಂದಿನ ಆದೇಶದವರೆಗೆ ಅಥವಾ ಮುಖ್ಯಮಂತ್ರಿಯವರ ಪದಾವಧಿಯವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸ್ಥಳಾಂತರಿಸಲಾಗಿದೆ.

| | | |
|---|---|---|
| 1. | ಶಾಖಾಧಿಕಾರಿ | 01 ಹುದ್ದೆ |
| 2. | ಗ್ರೂಪ್ 'ಸಿ' | 01 ಹುದ್ದೆ |
| 3. | ಗ್ರೂಪ್ 'ಡಿ' | 02 ಹುದ್ದೆ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

ಪಿ.ಆರ್. 1446

## ವಸತಿ ಸಚಿವಾಲಯ

**ವಿಷಯ :** ನಿರ್ಮಲಜ್ಯೋತಿ ಯೋಜನೆಯಡಿಯಲ್ಲಿ ರಾಯಚೂರು ನಗರದ ಕೊಳಚೆ ಪ್ರದೇಶಗಳ ಉನ್ನತೀಕರಣ ಮತ್ತು ಅಭಿವೃದ್ಧಿಪಡಿಸುವ ಕಾಮಗಾರಿ ಕುರಿತು-ಮಂಡಳಿ ಅಧಿಕಾರ ವ್ಯಾಪ್ತಿ ಮೀರಿರುವ ವರ್ಕ್ಸ್‌ಸ್ಲಿಪ್‌ಗೆ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ವ ಇ 34 ಕೊಮಂಲೆ 2002(8) ದಿನಾಂಕ: 4.11.2002 ಮತ್ತು 22.11.2002.
2) ಆಯುಕ್ತರು, ಕಕೊನಿಮ ಇವರ ಪತ್ರ ಸಂಖ್ಯೆ: ಕಕೊನಿಮ/ಆಯುಕ್ತರು/ನಿಜ್ಯೋ/ರಾಯಚೂರು/2005-06/1077, ದಿನಾಂಕ 19.11.2005.
3) ಕಕೊನಿಮ / ಆಯುಕ್ತರು / ನಿಜ್ಯೋ / ರಾಯಚೂರು / 2006-07 /389, ದಿನಾಂಕ: 19.6.2006.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರಾಯಚೂರು ನಗರದ ವ್ಯಾಪ್ತಿಯಲ್ಲಿ ಬರುವ ಕೊಳಚೆ ಪ್ರದೇಶಗಳಲ್ಲಿನ ಕೊಳಚೆ ನಿವಾಸಿಗಳಿಗೆ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ನಿರ್ಮಲಜ್ಯೋತಿ ಯೋಜನೆಯಡಿಯಲ್ಲಿ ರೂ. 385.40 ಲಕ್ಷಗಳ ಅಂದಾಜು ಪಟ್ಟಿಯಂತೆ ಕಾಮಗಾರಿಗಳನ್ನು ನಿರ್ವಹಿಸಲು ಅನುಮೋದಿಸಿದ್ದು, ಇದರಲ್ಲಿ ರೂ.368.88 ಗಳಿಗೆ ಟೆಂಡರ್ ಕರೆಯಲಾಗಿದೆ. ಟೆಂಡರ್‌ನಲ್ಲಿ ಅತಿ ಕಡಿಮೆ ದರ ಅಂದರೆ ಟೆಂಡರ್ ಕರೆಯಲಾದ ಮೊತ್ತಕ್ಕಿಂತ ಶೇ 9.98 ರಷ್ಟು ಹೆಚ್ಚಿನ ದರದಲ್ಲಿ ಕಾಮಗಾರಿಗಳ ಅಂದಾಜು ಪಟ್ಟಿಗೆ ಟೆಂಡರ್ ನಿಯಮದಂತೆ ಸಕ್ಷಮ ಪ್ರಾಧಿಕಾರದಿಂದ ತಾಂತ್ರಿಕ ಅನುಮೋದನೆ ಹಾಗೂ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯ ಟೆಂಡರ್ ಅಧಿಸೂಚನೆ ದಿನಾಂಕ: 2.5.2002 ರಲ್ಲಿನ ಟೆಂಡರ್ ಷೆಡ್ಯೂಲ್‌ಗಳ ಷರತ್ತುಗಳಂತೆ ಕಾಮಗಾರಿಗಳನ್ನು ನಿರ್ವಹಿಸಲು ಗುತ್ತಿಗೆದಾರರಾದ ಶ್ರೀ ವಿ.ಕೆ. ಭಟ್, ಹೈದರಾಬಾದ್ ಇವರಿಗೆ ನೀಡಲು ಸರ್ಕಾರ ಮಂಜೂರು ನೀಡಿದೆ.

ಮೇಲೆ ಕ್ರಮ ಸಂಖ್ಯೆ: (2) ಮತ್ತು 3ರಲ್ಲಿ ಓದಲಾದ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರ ಪ್ರಸ್ತಾವನೆಯಲ್ಲಿ ದಿನಾಂಕ: 30.11.2004 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ರಾಜ್ಯಮಟ್ಟದ ಯೋಜನಾ ನಿಯಾಮಕ ಸಮಿತಿ ಸಭೆಯಲ್ಲಿ ಚರ್ಚಿಸಿ, ಮೊದಲ ಹಂತದಲ್ಲಿ ಗುತ್ತಿಗೆದಾರರು ನಿರ್ವಹಿಸಿರುವ ಕಾಮಗಾರಿಗಳ ಪರಿವೀಕ್ಷಣೆ ಮಾಡಿ ವರದಿ ಸಲ್ಲಿಸಲು ಕಾಮಗಾರಿಗಳಲ್ಲಿ ಮೂಲ ಮಂಜೂರಾತಿಯಲ್ಲಿ ಬದಲಾವಣೆಯಾಗಿದ್ದಲ್ಲಿ ಬದಲಾವಣೆಯಾದ ಕಾಮಗಾರಿಗಳ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಮಂಜೂರಾತಿ ಪಡೆಯಲು ತಿಳಿಸಲಾಗಿದೆ. ಅದರಂತೆ ಮಂಡಳಿಯ ತಾಂತ್ರಿಕ ನಿರ್ದೇಶಕರು, ರಾಯಚೂರು ನಗರದ ಹೆಚ್ಚುವರಿ ಕಾಮಗಾರಿಗಳು ಕೊಳಚೆ ಪ್ರದೇಶಗಳಿಗೆ ಅಗತ್ಯ ಹಾಗೂ ಕನಿಷ್ಠ ಮೂಲಭೂತ ಸೌಕರ್ಯಗಳನ್ನು ಅಗತ್ಯವಾಗಿ ನಿರ್ವಹಿಸಬೇಕಾಗಿರುವುದರಿಂದ ಈ ಕಾಮಗಾರಿಗಳ ಅವಶ್ಯಕತೆ ಆಧರಿಸಿ ಜಿಲ್ಲಾ ಮಟ್ಟದ ಯೋಜನಾ ನಿಯಮಾಕ ಸಮಿತಿ ಸಭೆಯಲ್ಲಿ ಈ ಹೆಚ್ಚುವರಿ ಕಾಮಗಾರಿಗಳು ಅವಶ್ಯಕವೆಂದು ಪರಿಗಣಿಸಿ ನಿರ್ಣಯ ಕೈಗೊಂಡಿರುವುದರಿಂದ ಪುಟ್ಟ ಮಕ್ಕಳ ಸುರಕ್ಷತೆಯ ಹಿತದೃಷ್ಟಿಯಿಂದ ಅಡ್ಡಮೋರಿ ಮಾಡಿ ಅದರ ಮೇಲೆ ಕಾಂಕ್ರೀಟ್ ಕೆಲಸ, ನೀರಬಾವಿ ಕುಂಟಾದಲ್ಲಿ ರಸ್ತೆಗಳಿಗೆ ಡಾಂಬರೀಕರಣ ಬದಲಾಗಿ ಕಾಂಕ್ರೀಟ್ ರಸ್ತೆಯನ್ನು ನಿರ್ಮಿಸುವುದು ಎಲ್ಲಾ ಮೆಸನರಿ ಕಾಲುವೆಗಳ ಮೇಲೆ ಕಾಂಕ್ರೀಟ್ ಕೋಪಿಂಗ್ ಹಾಕುವುದು, ಕಾಲುವೆಗಳ ಮಧ್ಯದಲ್ಲಿ ನೀರು ಹರಿಯಲು ಸುಗಮವಾಗುವುದಕ್ಕೆ ತಳಕ್ಕೆ ಕಾಂಕ್ರೀಟ್ ಹಾಕಿ ಮಡ್ಡಿ ಮಾಡುವುದು, ಶಾಲಾ ಕಾಲೇಜುಗಳಿಗೆ ಹೋಗಲು ಅನುಕೂಲವಾಗುವಂತೆ ಸೇತುವೆಯನ್ನು ಕಟ್ಟುವುದು, ಕಾಲುವೆಯಿಂದ ಹರಿದು ಬಂದ ನೀರನ್ನು ಮುಖ್ಯ ಹಳ್ಳಕ್ಕೆ ಸೇರಿಸಲು ಅನುಕೂಲವಾಗುವಂತೆ ದೊಡ್ಡ ಚರಂಡಿಯನ್ನು ನಿರ್ಮಿಸುವುದು ಇತ್ಯಾದಿ ಹೆಚ್ಚುವರಿ ಕಾಮಗಾರಿಗಳನ್ನು ಕೈಗೊಂಡಿರುವುದಾಗಿ ತಿಳಿಸಿ ಹೆಚ್ಚುವರಿ ಪ್ರಮಾಣದಲ್ಲಿ ನಿರ್ವಹಿಸಿರುವ ಕಾಮಗಾರಿಗಳಿಗೆ ವರ್ಕ್‌ಸ್ಲಿಪ್‌ಗಳನ್ನು ತಯಾರಿಸಿದ್ದು ಸದರಿ ವರ್ಕ್ ಸ್ಲಿಪ್‌ಗಳ ಮೊತ್ತವು ರೂ. 65.85 ಲಕ್ಷಗಳಾಗಿದ್ದು, ಈ ಮೊತ್ತನ್ನು ಮೂಲ ಅಂದಾಜು ಮೊತ್ತ ರೂ.385.40 ಲಕ್ಷಗಳಿಗೆ ಹೋಲಿಸಿದಾಗ ಶೇ 17.09 ರಷ್ಟಾಗಿದ್ದು, ಈ ಯೋಜನೆಯು ಸಂಪೂರ್ಣ ಫಲಪ್ರದ ಆಗಬೇಕಾದಲ್ಲಿ ಕೆಲವು ಹೆಚ್ಚುವರಿ ಕಾಮಗಾರಿಗಳು ಅನಿವಾರ್ಯವಾಗಿರುವುದರಿಂದ ಹಾಗೂ ಇದು ಮಂಡಳಿಯ ಅಧಿಕಾರಿ ವ್ಯಾಪ್ತಿ ಮೀರಿರುತ್ತದೆ. ಪ್ರಸ್ತುತ ಕಾಮಗಾರಿಗಳು ಬಹುತೇಕ ಪೂರ್ಣಗೊಂಡಿದ್ದು ಲೋಕೋಪಯೋಗಿ ಇಲಾಖೆ ಸಂಹಿತೆ (i) Volume-1 ರ ಕಂಡಿಕೆ 323 ರೀತ್ಯಾ ಹಾಗೂ (ii) ಟೆಂಡರ್ ಕರಾರಿನಲ್ಲಿ General Condition of Contract - Clause 3,12.2 ರಿಂದ 3,12.8 ರೀತ್ಯಾ ವರ್ಕ್‌ಸ್ಲಿಪ್ ಐಟಂಗಳನ್ನು ನಿರ್ವಹಿಸಲು ಅವಕಾಶವಿದ್ದು, ಲೋಕೋಪಯೋಗಿ ಇಲಾಖೆ ಮತ್ತು ನೀರಾವರಿ ಇಲಾಖೆಗಳ ಆರ್ಥಿಕ ಪ್ರತ್ಯಾಯೋಜನೆ ಸರ್ಕಾರದ ಆದೇಸ ಸಂಖ್ಯೆ: ಪಿಬ್ಲ್ಯೂಡಿ 1 ಎಫ್‌ಸಿಆರ್/93 ಬೆಂಗಳೂರು ದಿನಾಂಕ 15.12.1994ರಲ್ಲಿನ ಕಂಡಿಕೆ 4ರ ಪ್ರಕಾರ ಮಂಜೂರಾತಿ ನೀಡುವ ಅಧಿಕಾರ ಸರ್ಕಾರದ ವ್ಯಾಪ್ತಿಯಲ್ಲಿ ಬರುವುದರಿಂದ ಒಟ್ಟು ಯೋಜನಾ ಮೊತ್ತ (Final cost of the work) ರೂ. 383.40 ಲಕ್ಷಗಳಾಗುವ ಸಂಭವವಿದ್ದು, ದಿನಾಂಕ: 20.8.2004 ರಂದು ರಾಜ್ಯ ಮಟ್ಟದ ಯೋಜನಾ ನಿಯಾಮಕ ಸಮಿತಿಯ ತೀರ್ಮಾನದಂತೆ ಈ ಮೊತ್ತವನ್ನು ಯಾವುದೇ ಆರ್ಥಿಕ ಹೊರೆ ಇಲ್ಲದೆ ಟೆಂಡರ್ ಆದ ಮತಿಯಲ್ಲೇ ಭರಿಸಲಾಗುವುದರಿಂದ ರೂ.65.86 ಲಕ್ಷಗಳ ವರ್ಕ್‌ಸ್ಲಿಪ್‌ನ ಹೆಚ್ಚುವರಿ ಮೊತ್ತಕ್ಕೆ ಅನುಮೋದನೆ ನೀಡಲು ಕೋರಿರುತ್ತಾರೆ.

ಸರ್ಕಾರದ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 70 ಕೊಮಂಲೆ 2006, ಬೆಂಗಳೂರು, ದಿನಾಂಕ: 18ನೇ ಸೆಪ್ಟೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ರಾಯಚೂರು ನಗರದಲ್ಲಿ ನಿರ್ಮಲಜ್ಯೋತಿ ಯೋಜನೆಯಡಿಯಲ್ಲಿ ರೂ. 385.40 ಲಕ್ಷಗಳ ಅಂದಾಜು ಪಟ್ಟಿಯ ಕಾಮಗಾರಿಗಳಿಗೆ ಮಂಜೂರಾತಿ ನೀಡಿದ್ದು, ಕಾಮಗಾರಿ ಬದಲಾವಣೆ ಹಾಗೂ ಹೆಚ್ಚುವರಿ ಪ್ರಮಾಣಲ್ಲಿ ನಿರ್ವಹಿಸಿರುವ ಕಾಮಗಾರಿಗಳಿಗೆ ತಯಾರಿಸಿರುವ ವರ್ಕ್‌ಸ್ಲಿಪ್ ಮೊತ್ತ ರೂ. 65.85 ಗಳಾಗಿದ್ದು, ಇದು ಮೂಲ ಅಂದಾಜು ಮೊತ್ತಕ್ಕಿಂತ ರೂ. 9.98 ಲಕ್ಷಗಳು

ಹೆಚ್ಚಾಗಿದ್ದು, ಅಂದಾಜು ಮೊತ್ತ ರೂ. 385.40 ಹೋಲಿಸಿದ್ದು, ಶೇ. 17.09 ರಷ್ಟು ಹೆಚ್ಚಾಗಿದ್ದು, ಮಂಡಳಿ ಅಧಿಕಾರಿ ವ್ಯಾಪ್ತಿ ಮೀರಿರುವುದರಿಂದ ಹಾಗೂ ಇದು ಒಟ್ಟಾರೆ ಅಂದಾಜು ಮೊತ್ತಕ್ಕಿಂತ ರೂ.65.86 ಲಕ್ಷಗಳು ಹೆಚ್ಚಾಗಿರುವುದರಿಂದ ಈ ಹೆಚ್ಚುವರಿ ಮೊತ್ತವನ್ನು ಒಟ್ಟಾರೆ ಯೋಜನಾ ಮೊತ್ತದ ಮಿತಿಯಲ್ಲಿ ಹಾಗೂ ದಿನಾಂಕ: 4.11.2002 ಮತ್ತು 22.11.2002ರ ಆದಸದಲ್ಲಿ ವಿಧಿಸಿರುವ ಷರತ್ತುಗಳನ್ನು ಕಟ್ಟುನಿಟ್ಟಾಗಿ ಪಾಲಿಸುವ ಷರತ್ತಿಗೆ ಒಳಪಟ್ಟು ರೂ. 65.85 ಗಳ ವರ್ಕ್‌ಸ್ಲಿಪ್‌ಗೆ ಸರ್ಕಾರ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1455

**ಕೆ. ಸುಬ್ಬಯ್ಯ**

ಪೀಠಾಧಿಕಾರಿ-4 (ಪ್ರಭಾರ), ವಸತಿ ಇಲಾಖೆ.

## INFRASTRUCTURE DEVELOPMENT SECRETARIAT

**Sub :** Release of Rs. 15.00 lakhs to meet the cost of land acquisition to construct the link road from Malavoor Bridge to Mangalore Airport-reg.

**Read :**
1) Letter No.D.O.KUIDFC/ENG (KUDCEMP)/2006-07 dated 22.4.2006.
2) Govt.Letter of even no. dated 26.5.2006.
3) Letter No.LAQ/CR/27/2006-07 dated 19.7.2006.

**Preamble:**

In the letter read at Sl.No. 1 above, Karnataka Urban Infrastructure Development and Corporation had sent a proposal requesting the Government in Infrastructure Development Department to bear the probable cost of Rs.25 lakhs to acquire an extent of 5.70 acres of land as per the alignment finalised in KUIDFC in consultation with AAI and PWD for the new road which was agreed to be constructed by KUIDFC on the request of Airport Director, Mangalore as the same would reduce the distance between Mangalore city and Airport. In the Government letter dd.26.5.2006 read at Sl.No.2 above, Government have conveyed the acceptance of the proposal and have agreed to meet the cost of acquisition of about Rs.25 lakhs as per guidance value and the D.C, D.K. was requested to take necessary action to complete the land acquisition process and handover the required land to KUIDFC. The DC, in his letter dated 19.7.2006 had sent a revised proposal stating that the actual extent of land required to be acquired for this Purpose is only 2.39 acres and the expenditure towards acquisition of this land would be RS.15.00 lakhs and has requested release of the same.

Government have considered his proposal and hence this order.

**Government Order No. IDD 46 DIA 2004 (P), Bangalore, Dated: 29th September 2006**

After careful examination of the above proposal, Government are pleased to release an amount of Rs. 15.00 lakhs (Rupees Fiften lakhs) only out of the provision under the Head of Account - "Development of Minor Airport "5465-01-190-1-05-211-Investment" towards the expenditure incurred for acquiring lands to an extent of 2.39 acres as proposed by the Deputy Commissioner, Dakshina Kannada district for the purpose of constructing the link road rom Malavoor Bridge to Mangalore Airport.

2. This order is issued in accordance with FDs.GO.No.FD 1 TFP 2003 dated 12.6.2003.

3. The Deputy Commissioner, Dakshina Kannada is authorised to draw this amount on a payees receipt countersigned by the Under Secretary to Government, Infrastructure Development Department.

4. The utilization certificate for the amount spent in this regard is to be furnished to Government.

By Order and in the name of the Governor of Karnataka,

**N. Manjula Geetha**

P.R. 1457

Under Secretary to Government,
Infrastructure Development Department.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ನಗರಾಭಿವೃದ್ಧಿ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರು ದಿನಾಂಕ:3.10.2006 ಮತ್ತು 4.10.2006 ರಂದು ನವದೆಹಲಿಗೆ ಹೋಗಿ ಬರಲು ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :** 1) ಪ್ರ.ಕಾ.ರವರ ಆಪ್ತ ಕಾರ್ಯದರ್ಶಿಯರ ಟಿಪ್ಪಣಿ ಸಂಖ್ಯೆ:ನಅಇ/ಪ್ರಕಾ/50/06 ದಿನಾಂಕ: 3.10.2006.

**ಪ್ರಸ್ತಾವನೆ :**

ನವದೆಹಲಿಯ ನಿರ್ಮಾಣ ಭವನದಲ್ಲಿ ದಿನಾಂಕ:4.10.2006 ರಂದು ನಡೆಯುವ "Working Group on Urban Transport including Mass Rapid Transport System for 11th five year plan" ಸಭೆಯಲ್ಲಿ ಭಾಗವಹಿಸುವ ಸಲುವಾಗಿ ಶ್ರೀಮತಿ ಲಕ್ಷ್ಮಿ ವೆಂಕಟಾಚಲಂ, ಭಾ.ಆ.ಸೇ., ಸರ್ಕಾರದ ಪ್ರಧಾನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ ಇವರು, ದಿನಾಂಕ:3.10.2006 ರಂದು ನವದೆಹಲಿಗೆ ಹೋಗಿ ದಿನಾಂಕ:4.10.2006 ರಂದು ಹಿಂದಿರುಗಿ ಬರಲು ಸೂಕ್ತ ಆದೇಶವನ್ನು ಹೊರಡಿಸುವಂತೆ ಮೇಲೆ (1)ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಪ್ರಧಾನ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಯವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 12 ಸಮನ್ವಯ 2006, ಬೆಂಗಳೂರು, ದಿನಾಂಕ: 3ನೇ ಅಕ್ಟೋಬರ್ 2006**

ಶ್ರೀಮತಿ ಲಕ್ಷ್ಮಿವೆಂಕಟಾಚಲಂ, ಭಾ.ಆ.ಸೇ., ಸರ್ಕಾರದ ಪ್ರಧಾನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ ಇವರು, ನವದೆಹಲಿಯ ನಿರ್ಮಾಣ ಭವನದಲ್ಲಿ ದಿನಾಂಕ:4.10.2006ರಂದು ನಡೆಯುವ "Working Group on Urban Transport including Mass Rapid Transport System for 11th five year plan" ಸಭೆಯಲ್ಲಿ ಭಾಗವಹಿಸುವ ಸಲುವಾಗಿ ದಿನಾಂಕ:3.10.2006 ರಂದು ನವದೆಹಲಿಗೆ ವಿಮಾನದಲ್ಲಿ ಪ್ರಯಾಣ ಮಾಡಿ ದಿನಾಂಕ:4.10.2006ರಂದು ಬೆಂಗಳೂರಿಗೆ ಹಿಂದಿರುಗಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಸದರಿ ಅಧಿಕಾರಿಗಳು ನಿಯಮಾನುಸಾರ ಪ್ರವಾಸ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.

ಈ ಆದೇಶವನ್ನು ಮುಖ್ಯ ಕಾರ್ಯದರ್ಶಿಗಳ ಟಿಪ್ಪಣಿ ಸಂಖ್ಯೆ:ಸಿಎಸ್/3782/2006, ದಿನಾಂಕ:29.9.2006 ರಲ್ಲಿ ನೀಡಿರುವ ಅನುಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ (ಸಮನ್ವಯ)

ಪಿ.ಆರ್. 1461

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** ಶ್ರೀ ವೈ. ಈರಣ್ಣ, ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ಚಿತ್ರದುರ್ಗ ಜಿಲ್ಲೆ ಇವರನ್ನು ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ :** 1) ಆಯುಕ್ತರ (ಪತ್ರ ಸಂ:ಸಕನಿ:ಸಿಬ್ಬಂದಿ-10/ಸಿಆರ್-29/2006-07, ದಿನಾಂಕ:23.9.2006.

2) ಪೊಲೀಸ್ ಇನ್‌ಸ್ಪೆಕ್ಟರ್ ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಚಿತ್ರದುರ್ಗ ಇವರ ಫ್ಯಾಕ್ಸ್ ಮೆಸೇಜ್ ದಿನಾಂಕ: 22.9.2006.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆಯುಕ್ತರ ಪತ್ರದಲ್ಲಿ ದಿನಾಂಕ:23.9.2006ರಲ್ಲಿ ಶ್ರೀ ವೈ. ಈರಣ್ಣ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ಚಿತ್ರದುರ್ಗರವರನ್ನು ಲಂಚ ನಿರೋಧ ಕಾಯ್ದೆ 1988ರನ್ವಯ ದಸ್ತಗಿರಿ ಮಾಡಲಾಗಿದೆಯೆಂದು ಇವರು ಮೂಲತಃ ಹಿಂದುಳಿದ ವರ್ಗಗಳ ಮತ್ತು ಅಲ್ಪ ಸಂಖ್ಯಾತರ ಇಲಾಖೆಯವರಾಗಿದ್ದು, ನಿಯೋಜನೆ ಮೇಲೆ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಯಾಗಿ ಚಿತ್ರದುರ್ಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಸದರಿಯವನ್ನು ಲಂಚ ನಿರೋಧ ಕಾಯ್ದೆ 1988ರನ್ವಯ ದಸ್ತಗಿರಿ ಮಾಡಿರುವುದರಿಂದ ಈ ಅಧಿಕಾರಿಯನ್ನು ಕೂಡಲೇ ಸಿಸಿಎ ನಿಯಮ 10(1)(ಎ)ರಡಿ ಅಮಾನತ್ತುಗೊಳಿಸುವಂತೆ ಆಯುಕ್ತರು ಶಿಫಾರಸ್ಸು ಮಾಡಿರುವುದರಿಂದ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ:ಸಕಇ 269 ಪಕಸೇ 2006, ಬೆಂಗಳೂರು, ದಿನಾಂಕ: 3ನೇ ಅಕ್ಟೋಬರ್ 2006**

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ವೈ.ಈರಣ್ಣ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ ಚಿತ್ರದುರ್ಗ (ಮೂಲತಃ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ) ಇವರ ವಿರುದ್ ಲಂಚ ನಿರೋಧ ಕಾಯ್ದೆಯಡಿ ಪ್ರಕರಣ ದಾಖಲಿಸಲ್ಪಟ್ಟಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10(1)(ಎ) ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಶ್ರೀ ವೈ. ಈರಣ್ಣ, ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ ಚಿತ್ರದುರ್ಗ ಇವರನ್ನು ಇಲಾಖಾ ವಿಚಾರಣೆಗೆ ಕಾಯ್ದಿರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತಿನಲ್ಲಿಡಲಾಗಿದೆ.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ವೈ. ಈರಣ್ಣ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ ಚಿತ್ರದುರ್ಗರವರು ಕರ್ನಾಟಕ ನಾಗರೀಕ ಸೇವಾ ನಿಯಮ 1957ರ ನಿಯಮ 98ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ವೈ. ಈರಣ್ಣ, ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ ಚಿತ್ರದುರ್ಗರವರು ನಿಯಮಗಳ ಪ್ರಕಾರ ಸಕ್ಷಮ ಪ್ರಾಧಿಕಾರಿಯ ಲಿಖಿತ ಅನುಮತಿಯಿಲ್ಲದೆ ತಮ್ಮ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಶೇಖರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 1466

## INFRASTRUCTURE DEVELOPMENT SECRETARIAT

**Sub :** Release of funds for acuisition of additional land for BIAP.

**Read :** 1) Letter No.AGM (BIAP)/1757/2006-07 dated 7.8.2006 of the CMD, KSIIDC.

**Preamble:**

In letter dated 7.8.2006 read bove, the CMD, KSIIDC has stated that the final Notification under section 28(4) of KIAD Act has been issued for acquiring 164.35 acres of additional land required for the Trumpet Interchange, the access road to the airport and for accommodating the second runway. Based on the recommedations of the advisory committee headed by the concerned Deputy Commissioner on the compensation to be paid to the landowners, KIADB has requested to provide Rs.49.49 crores towards payment of compensation excluding the cost of Malkies and structures to be decided separately. Further, it is stated that it will be necessary to take into the consideration the cost involved towards acquisition of 2 acres 3 guntas identified at the time of joint measurement and 32 acres 11.5 guntas in Gangamuthanahalli village for which final Notification is not yet issued, thus making the total extent of

additional land involved to 199 acres and 9,5 guntas for which payment of compesation has to be made. Out of the above, 122 acres 13 guntas are towards access road and for accomodating the second runway which are required to be handed over to BIAL. Of the remaining portion, 44 acres 25 guntas is meant for Trumpet Interchange and 32 acres 11.5 guntas is for housing / residential purposes.

To meet the cost towards acquisition of this additional lands KSIIDC has requested sanction of Government to utilize the following funds available with KSIIDC.

(1) The balance amount of Rs.24.54 crores available out of the Rs.150.00 crores loan availed from HUDCO.

(2) Rs.4.38 crores released by Government of Karnataka to chief (the losing bidder) towards bid preparation cost, which has been susequently included in the project cost and reimbursed by BIAL to KSIIDC.

(3) Rs. 3.65 crores released by Government of Karnataka to BIAL at the time of formation of BIAL, which was kept with BIAL as share application money and subsequently returned to KSIIDC.

With the above, KSIIDC has stated that it would still have a residual gap of Rs.3.76 crores to meet the total cost of acquisition and hence have sought allocation of additional funds towards the release of this amount

The proposal for permission of utilisation of balance funds mentioned bove is still under consideration of Government. However, Government have examined the proposal of additional allocation of Rs.3.76 crores and have decided to release the same. Accordingly the following orders are issued.

**Government Order No. IDD 79 DIA 2006, Bangalore, Dated: 9th October 2006**

After careful examination of the above proposal, Government sanction is hereby accorded for release of Rs.3.76 crores under the Head of Account "5465-01-190-2-01 (P)-211-Investments", out of Rs.10.78 crores provided in 2006-07 budget-towards acquisition of land for second runway of BIAL project.

2. The CMD, KSIIDC is authorized to draw the above amount of Rs.3.76 crores (Rupees Three Crores and Seventy Six Lakhs) only on a payees receipt counter signed by the Under Secretary to Gvernment Infrastructure Development Department.

4. This order is issued with the concurrence of FD vide U.O.No. FD 1631 Exp-I/06 dated 22.9.2006.

By Order and in the name of the Governor of Karnataka,

**N. Manjula Geetha**

P.R. 1489

Under Secretary to Government,

Infrastructure Development Department.

**SOCIAL WELFARE SECRETARIAT**

**CORRIGENDUM**

**No: SWD 82 SAD 03, Bangalore, Dated: 22nd July 2006**

In Government Order No.SWL 123 BCA 79 dated:1.5.1979, against the entry at Sl.No. noted below, in annexure I and II the following footnote is appended.

**Annexure-I**

List of Backward classes of citizens under Article 15(4) of the Constitution.

Sl.No. *68 (a) Kanisan (b) Kanyan (c) Kaniya

*"Kaniyan" deleted vide G.O.No. SWL 2 TBS 77, dated:23.1.1978 since it is included in the list of Scheduled Castes. Its synonyms are included.

**Annexure-II**

List of Backward classes of citizens under Article 16(4)of the Constitution. Sl.No. 63* (a) Kanisab (b) Kanyan (c) Kaniya

*Kaniyan deleted vide G.O.No:SWL 12 TBS 77, dated:23.1.78 since it is included in the list of Scheduled Castes. Its Synonyms are included.

As per Constitution Scheduled Castes and Scheduled Tribes Order (Amendment) Act 1976, - Kaniyan, Kanyan (in Kollegal Taluk of Mysore District) (presently Chamarajanagar District) is included at entry Sl.No.18, in the Scheduled Tribes list applicable only to the Karnataka State.

Since the said caste is included in the Scheduled Tribes, the footnote appended at Annexre I and II of the above said Government Order is factually incorrect. Therefore, the footnotes as above may be read as (is included at entry Sl.No. 18 in the Scheduled Tribe") "Scheduled Tribes" instead of "Scheduled CAstes" appearing therein, with immediate effect.

By Order and in the name of the Governor of Karnataka,

**A.M. CHIDANANDA SWAMY**

P.R. 1460

Under Secretary to Government-II,
Social Welfare Department.

## ಕಂದಾಯ ಸಚಿವಾಲಯ

**ವಿಷಯ :** ಡಾ|| ಇ.ಜೆ. ವೆಂಕಟೇಶನ್, ಸಾಹಿತ್ಯ ಪಂಡಿತರು, ಸರ್ಕಾರಿ ಸಂಸ್ಕತ ಕಾಲೇಜು ಮೇಲುಕೋಟೆ ಇವರಿಗೆ ಹತ್ತು ವರ್ಷಗಳ ಸೇವೆಗಾಗಿ ಕಾಲಬದ್ಧ ವೇತನ ಬಡ್ತಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಧಾರ್ಮಿಕ ದತ್ತಿ ಆಯುಕ್ತರ ದಿ:5.7.2006ರ ಪತ್ರ ಸಂಖ್ಯೆ:ಸಿಬ್ಬಂದಿ/2/ಸಿಆರ್/43/06-07.

**ಪ್ರಸ್ತಾವನೆ :**

ಸರ್ಕಾರಿ ಸಂಸ್ಕೃತ ಕಾಲೇಜು, ಮೇಲುಕೋಟೆ, ಇಲ್ಲಿ 'ಸಾಹಿತ್ಯ ಪಂಡಿತರು' ಈ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಡಾ|| ಇ.ಜೆ. ವೆಂಕಟೇಶನ್‌ರವರು ದಿನಾಂಕ:20.5.1996 ರಿಂದ ದಿ:19.5.2006ಕ್ಕೆ 10 ವರ್ಷಗಳ ಸೇವೆಯನ್ನು ಯಾವುದೇ ಪದೋನ್ನತಿ ಇಲ್ಲದೆ ಒಂದೇ ಹುದ್ದೆಯಲ್ಲಿ ಪೂರೈಸಿರುವುದರಿಂದ ಕಾಲಬದ್ಧ ವೇತನ ಬಡ್ತಿಯನ್ನು ದಿನಾಂಕ:20.5.2006 ರಿಂದ ಜಾರಿಗೆ ಬರುವಂತೆ ವೇತನ ಶ್ರೇಣಿ ರೂ.6300-150-7200-200-8800-260-10880-320-11840ನ್ನು ಮಂಜೂರು ಮಾಡಿ ಆದೇಶವನ್ನು ಹೊರಡಿಸುವಂತೆ ಮೇಲೆ ಓದಲಾದ ದಿನಾಂಕ:5.7.2006ರ ಪತ್ರದಲ್ಲಿ ಧಾರ್ಮಿಕ ದತ್ತಿ ಆಯುಕ್ತರು ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 71 ಮುಸೇವಿ 2006, ಬೆಂಗಳೂರು, ದಿನಾಂಕ: 3ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ಕೂಲಂಕಷಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ ಡಾ|| ಇ.ಜೆ. ವೆಂಕಟೇಶನ್, ಸಾಹಿತ್ಯ ಪಂಡಿತರು, ಸರ್ಕಾರಿ ಸಂಸ್ಕೃತ ಕಾಲೇಜು, ಮೇಲುಕೋಟೆ ಇವರು ದಿನಾಂಕ:20.5.1996 ರಿಂದ ದಿ:19.5.2006ರವರೆಗೆ 10 ವರ್ಷಗಳ ಸೇವೆಯನ್ನು ಯಾವುದೇ ಪದೋನ್ನತಿ ಇಲ್ಲದೆ ಒಂದೇ ಹುದ್ದೆಯಲ್ಲಿ ಪೂರೈಸಿರುವುದರಿಂದ, ದಿನಾಂಕ:20.5.2006 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಕಾಲಬದ್ಧ ವೇತನ ಮುಂಬಡ್ತಿ) ನಿಯಮಗಳು, 1983ರನ್ವಯ ಆಯ್ಕೆ ಕಾಲಿಕ ವೇತನ ಶ್ರೇಣಿ ರೂ. 6300-150-7200-200-8800-260-10880-320-11840ರಲ್ಲಿ ಕಾಲಬದ್ಧ ವೇತನ ಬಡ್ತಿಯನ್ನು ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಎನ್. ಪ್ರಸಾದ್**

ಪಿ.ಆರ್. 1471

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ).

## ಸಹಕಾರ ಸಚಿವಾಲಯ

**ವಿಷಯ :** ಘಟಪ್ರಭಾ ಸಹಕಾರ ಸಕ್ಕರೆ ಕಾರ್ಖಾನೆ, ನಿ, ಗೋಕಾಕ ತಾಲ್ಲೂಕು ಬೆಳಗಾವಿ ಜಿಲ್ಲೆ ದರ 2005-06ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ಮುಂದೂಡುವ ಕುರಿತು ಆದೇಶ.

**ಓದಲಾಗಿದೆ :** ಅಧ್ಯಕ್ಷರು, ಘಟಪ್ರಭಾ ಸಹಕಾರ ಸಕ್ಕರೆ ಕಾರ್ಖಾನೆ, ನಿ, ಇವರ ಪತ್ರ ದಿನಾಂಕ 22.9.2006.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಘಟಪ್ರಭಾ ಸಹಕಾರ ಸಕ್ಕರೆ ಕಾರ್ಖಾನೆ ನಿ. ಗೋಕಾಕ್ ತಾಲ್ಲೂಕು, ಬೆಳಗಾವಿ ಜಿಲ್ಲೆ, ಇದರ ವಾರ್ಷಿಕ ಮಹಾ ಸಭೆಯನ್ನು 29.9.2006 ರಂದು ಕರೆಯಲಾಗಿದ್ದು, ದಿನಾಂಕ: 25.9.2006 ರಿಂದ 29.9.2006 ರವರೆಗೆ ಬೆಳಗಾವಿಯಲ್ಲಿ ವಿಧಾನ ಮಂಡಲದ ಅಧಿವೇಶನ ನಡೆಯುವುದರಿಂದ, ವಾರ್ಷಿಕ ಮಹಾ ಸಭೆಯನ್ನು ನಡೆಸುವುದು ಸಮಂಜಸವಾಗಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಘಟ ಪ್ರಭಾ ಸಹಕಾರ ಸಕ್ಕರೆ ಕಾರ್ಖಾನೆಯನ್ನು ವಾರ್ಷಿಕ ಮಹಾ ಸಭೆಯನ್ನು ಕನಿಷ್ಟಪಕ್ಷ ಮೂರು ತಿಂಗಳವರೆಗೆ ಮುಂದೂಡುವಂತೆ ಸದರಿ ಕಾರ್ಖಾನೆಯ ಅಧ್ಯಕ್ಷರು ವಾರ್ಷಿಕ ಮಹಾ ಸಭೆಯನ್ನು ಮುಂದೂಡುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಸಹಕಾರ ಸಂಘಗಳ ಕಾಯ್ದೆ 1959 ಕಲಂ 121 ರನ್ವಯ ದಿನಾಂಕ 31.12.2006 ರವರೆಗೆ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರ ಆದೇಶ ಸಂಖ್ಯೆ ಸಇ 209 ಸಸಕಾ 2006, ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಘಟಪ್ರಭಾ ಸಹಕಾರ ಸಕ್ಕರೆ ಕಾರ್ಖಾನೆ, ನಿ, ಗೋಕಾಕ್, ಗೋಕಾಕ್ ತಾಲ್ಲೂಕು, ಬೆಳಗಾವಿ ಜಿಲ್ಲೆ ಇದರ 2005-06ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ನಡೆಸಲು ದಿನಾಂಕ: 31.12.2006 ರವರೆಗೆ ಕಾಲಾವಕಾಶ ನೀಡಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ಪ್ರಕರಣ 27(1)ರ ಉಪಬಂಧಗಳು ಈ ಕೆಳಗಿನಂತೆ ಮಾರ್ಪಾಟುಗಳೊಂದಿಗೆ ಅನ್ವಯವಾಗುತ್ತದೆ ಎಂದು ನಿರ್ಧರಿಸುತ್ತದೆ ಎಂದರೆ,

**27ರ ಪ್ರಕರಣದಲ್ಲಿ:**

27ನೇ ಪ್ರಕರಣದ ಉಪ ಪ್ರಕರಣ (1) ಪರಂತುದಲ್ಲಿನ ಆರು ತಿಂಗಳು ಎಂಬ ಪದಗಳಿಗೆ ಬದಲಾಗಿ ಹದಿನೈದು ತಿಂಗಳು ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 27(1)ಕ್ಕೆ ಮಾಡಿದ ಮಾರ್ಪಾಡು ದಿನಾಂಕ:31.12.2006 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ಕ್ಕೆ ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರಪುರಕರ ವೆಂಕಟೇಶ್**

ಪಿ.ಆರ್. 1482

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಡಿ.ಆರ್.ಡಿ.ಎ. ಆಡಳಿತ ಯೋಜನೆಯಡಿ ಬದಲಿ ವಾಹನ ಖರೀದಿಸುವ ಬಗ್ಗೆ.

**ಓದಲಾಗಿದೆ :** 1) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಆರ್ 20016-32-2004 ಡಿ.ಆರ್.ಡಿ.ಎ.ದಿನಾಂಕ:3.1.2005.

2) ಚಾಮರಾಜನಗರ ರವರ ಪತ್ರ ಸಂಖ್ಯೆ: ಜಿಪಂಚಾ/ಆಡಳಿತ-2/148/2005-06 ದಿನಾಂಕ: 1.2.2006.

**ಪ್ರಸ್ತಾವನೆ :**

ಕೇಂದ್ರ ಸರ್ಕಾರವು ಉಲ್ಲೇಖ (1)ರ ಪತ್ರದಲ್ಲಿ ಬದಲಿ ವಾಹನ ಖರೀದಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡಿರುತ್ತದೆ. ಅದರನ್ವಯ ಚಾಮರಾಜನಗರ ಜಿಲ್ಲಾ ಪಂಚಾಯತ್, ದಿನಾಂಕ:1.2.2006 ರಂದು ಬದಲಿ ವಾಹನ ಖರೀದಿಸುವ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಕೆ ದಿನಾಂಕ:19.2.2005 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಎಂಇಇ 3366 ಅಂಬಾಸಿಡರ್ ಕಾರನ್ನು ನಿರುಪಯುಕ್ತವೆಂದು ಘೋಷಿಸಿ, ಸದರಿ ಕಾರಿಗೆ ಅಂದಾಜು ಬೆಲೆ ರೂ. 22,000-00 ನಿಗದಿಪಡಿಸಬಹುದು ಎಂದು ಅಂದಾಜಿಸಿದ್ದರು. ಈ ಮಧ್ಯೆ ಜಿಲ್ಲಾ ಪಂಚಾಯಿತಿ, ಚಾಮರಾಜನಗರ ರವರು ಹೊಸ ವಾಹನ ಖರೀದಿಸಲು, (1) ಮೆ|| ಸದರ್ನ ಮೋಟಾರ್ಸ್, ಬೆಂಗಳೂರು ಅಂಬಾಸಿಡರ್ ಎಎಂಬಿ ಬಿಯುಎನ್‌ಎಸಿ ಡೀಜೆಲ್ ಕಾರ್ ರೂ. 4,20,883-00 (2) ಯುಆರ್‌ಎಸ್ ಕೆಎಆರ್ ಸರ್ವೀಸ್ ಸೆಂಟರ್, (ಪಿ) ಲಿ. ರವರಿಂದ Victa GX. TC 8 STR Rs. 7,19,583-00ರ ಬೆಲೆಯ Proforma invoice ಗಳನ್ನು ಪಡೆದು, ಪ್ರಸ್ತಾವನೆಯೊಂದಿಗೆ ಸಲ್ಲಿಸಿರುತ್ತಾರೆ. ಅನುಪಯುಕ್ತ ವಾಹನ ಹರಾಜು ಮಾಡಿ ಬಂದ ಹಣ ಹಾಗೂ ಡಿ.ಆರ್.ಡಿ.ಎ. ಆಡಳಿತ ಯೋಜನೆಯಡಿಯಲ್ಲಿ ಲಭ್ಯವಿರುವ ಹಣದಿಂದ ಅಂಬಾಸಿಡರ್ ಎಎಂಬಿ ಬಿಯುಎನ್‌ಎಸಿ ಡೀಜೆಲ್ ಕಾರ್ ಅಥವಾ ಯುಆರ್‌ಎಸ್ ಕೆಎಆರ್ ಸರ್ವೀಸ್ ಸೆಂಟರ್, (ಪಿ) ಲಿ. ರವರಿಂದ Victa GX. TC 8 STR ಗಳಲ್ಲಿ ಯಾವುದಾದರೊಂದು ರೂ. 4,25,000-00 ಮಿತಿಗೊಳಪಟ್ಟು, ಕಡಿಮೆ ಮೌಲ್ಯದ ವಾಹನವನ್ನು ಹಳೆಯ ವಾಹನ ಹರಾಜು ಮಾಡಿ ಬಂದ ಹಣ ಹಾಗೂ ಡಿ.ಆರ್.ಡಿ.ಎ. ಆಡಳಿತ ಯೋಜನೆಯಲ್ಲಿ ಉಳಿಯುವ ಹಣ ರೂ. 4,25,000-00 ಗರಿಷ್ಠ ಮಿತಿಗೊಳಪಟ್ಟು, ಹೊಸ ವಾಹನ ಖರೀದಿಸಲು ಅನುಮತಿ ನೀಡಲಾಗಿದೆ. ಆದುದರಿಂದ ಈ ಆದೇಶ;

### ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 56 ಪರವ 2006, ಬೆಂಗಳೂರು, ದಿನಾಂಕ: 7ನೇ ಅಕ್ಟೋಬರ್ 2006

ರಾಜ್ಯ ಸರ್ಕಾರವು ಚಾಮರಾಜ ನಗರ ಜಿಲ್ಲಾ ಪಂಚಾಯಿತಿಯ ವಾಹನ ಸಂಖ್ಯೆ:ಎಂಇಇ 3366ರ ಬದಲಿಗೆ ಒಂದು ಹೊಸ ವಾಹನವನ್ನು ರೂ. 4,25,000-00 (ರೂಪಾಯಿ ನಾಲ್ಕು ಲಕ್ಷ ಇಪ್ಪತ್ತೈದು ಸಾವಿರ ಮಾತ್ರ) ಗರಿಷ್ಠ ಮಿತಿಗೊಳಪಟ್ಟು ಖರೀದಿಸಲು ಈ ಕೆಳಕಂಡ ಷರತ್ತಿಗೊಳಪಟ್ಟು ಅನುಮೋದನೆ ನೀಡಿದೆ.

- ಹೊಸ ವಾಹನವನ್ನು ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಆರ್ 20016-32-2004 ಡಿ.ಆರ್.ಡಿ.ಎ. ದಿನಾಂಕ:3.1.2005ರ ಸೂಚನೆಯನ್ವಯ
- ಡಿ.ಆರ್.ಡಿ.ಎ. ಆಡಳಿತ ಯೋಜನೆಯಡಿಯಲ್ಲಿ ಜಿಲ್ಲೆಗೆ ನಿಗದಿಪಡಿಸಿರುವ ಅನುದಾನದಿಂದ ಭರಿಸತಕ್ಕದ್ದು.
- ಹಳೆಯ ವಾಹನ ಹರಾಜು ಮಾಡಿ ಬಂದ ಹಣವನ್ನು ಹೊಸ ವಾಹನ ಖರೀದಿಗೆ ಬಳಸತಕ್ಕದ್ದು.
- ವಾಹನ ಖರೀದಿಗೆ ಡಿ.ಆರ್.ಡಿ.ಎ. ಆಡಳಿತ ಯೋಜನೆಯಡಿ ಲಭ್ಯವಿರುವ ಅನುದಾನ ರೂ. 4,25,000-00 (ರೂಪಾಯಿ ನಾಲ್ಕು ಲಕ್ಷ ಇಪ್ಪತ್ತೈದು ಸಾವಿರ ಮಾತ್ರ) ಗರಿಷ್ಠ ಮಿತಿಗೊಳಪಟ್ಟು ಖರೀದಿಸತಕ್ಕದ್ದು. ಯಾವುದೇ ಕಾರಣಕ್ಕೂ ಆರ್ಥಿಕ ಮಿತಿ ಮೀರತಕ್ಕದ್ದಲ್ಲ.
- ವೇತನಕ್ಕಾಗಿ ಖರ್ಚು ಮಾಡುವ ಗರಿಷ್ಠ ಶೇ.30 ರಲ್ಲಿ ಉಳಿತಾಯವಾಗುವ ಸಾದಿಲ್ವಾರು ವೆಚ್ಚದಿಂದ ಭರಿಸತಕ್ಕದ್ದು ಹಾಗೂ ಖರೀದಿಸಿದ ನಂತರ ಸರ್ಕಾರಕ್ಕೆ ತಿಳಿಸತಕ್ಕದ್ದು.
- ವಾಹನ ಖರೀದಿಯು ಸರ್ಕಾರದ ಖರೀದಿ ನಿಯಮಗಳನ್ವಯ ಇರತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತಿ ಸಂಖ್ಯೆ: ಆಇ 393 ವೆಚ್ಚ 6 2006 ದಿನಾಂಕ: 14.8.2006 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವ್ಹಿ.ಆರ್. ಇಲಕಲ್**

ಪಿ.ಆರ್. 1490

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಂ.ಬಿ. ಯಂಕಂಚಿ, ಸರ್ಕಾರಿ ಅಭಿಯೋಜಕರು, ಧಾರವಾಡ ಇವರ ವಿರುದ್ಧ ಇಲಾಖಾ ವಿಚಾರಣೆಯ ಬಗ್ಗೆ.

**ಓದಲಾಗಿದೆ :** 1) ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು ಇಲಾಖೆ ಇವರ ಪತ್ರ ಸಂಖ್ಯೆ ಡಿಪಿಎನ್: ಡಿಡಬ್ಲ್ಯೂಆರ್-764/2001, ದಿನಾಂಕ: 18.10.2001.

2) ಕಾರಣ ಕೇಳುವ ತಿಳುವಳಿಕೆ ಪತ್ರ ಸಂ:ಲಾ 397 ಪಿಪಿಇ 2001 ದಿನಾಂಕ: 10.1.2003.

3) ಆರೋಪಿತ ಅಧಿಕಾರಿಯ ಸಮಜಾಯಿಷಿ ಪತ್ರ ದಿನಾಂಕ 29.1.03.

4) ಸರ್ಕಾರಿ ಪತ್ರ ಸಂಖ್ಯೆ ಲಾ 397 ಪಿಪಿಇ 01 ದಿನಾಂಕ 24.6.2003.

5) ಸರ್ಕಾರಿ ಪತ್ರ ಸಂಖ್ಯೆ ಲಾ 397 ಪಿಪೀ 01 ದಿನಾಂಕ 10.6.2003.
6) ವಿಚಾರಣಾಧಿಕಾರಿಯವರ ವಿಚಾರಣಾ ವರದಿ ಸಂ. 78/2004 ದಿನಾಂಕ: 12.4.2004
7) 2ನೇ ಕಾರಣ ಕೇಳುವ ತಿಳುವಳಿಕೆ ಪತ್ರ ಸಂ: ಒಇ 967 ಪಿಪೀ 2005 ದಿನಾಂಕ: 28.1.2006
8) ಆರೋಪಿತ ಅಧಿಕಾರಿಯ ಸಮಜಾಯಿಷಿ ಪತ್ರ ದಿನಾಂಕ: 6.3.2006.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾಗಿರುವ ದಿನಾಂಕ:18.10.2001ರ ಪತ್ರದಲ್ಲಿ ಶ್ರೀ ಎಂ.ಬಿ. ಯಂಕಂಚಿ, 2ನೇ ಅಧಿಕ ಸರ್ಕಾರಿ ಅಭಿಯೋಜಕರು, ಧಾರವಾಡ ರವರು, 1) 2ನೇ ಅಧಿಕ ಸತ್ರ ನ್ಯಾಯಾಲಯದಲ್ಲಿ ಎಸ್.ಸಿ.ಸಂ:146/99ನ್ನು ನಡೆಸುವ ಸಮಯದಲ್ಲಿ ಪ್ರಕರಣದಲ್ಲಿ ಮೃತಳ ಸಂಬಂಧಿಕರೂ ಪ್ರಮುಖ ಸಾಕ್ಷಿಗಳೂ ಆದ ಪ್ರಾ.ಸಾ. 2 ರಿಂದ 6 ಇವರುಗಳು ಮುಖ್ಯ ವಿಚಾರಣೆಯಲ್ಲಿ ಅಭಿಯೋಜನೆ ಪರವಾಗಿ ಸಾಕ್ಷ್ಯ ನುಡಿದಿದ್ದು ಆರೋಪಿ ಪರ ವಕೀಲರು ಪಾಟೀ ಸವಾಲು ಮಾಡುವಾಗ ಸಂಪೂರ್ಣವಾಗಿ ಅಭಿಯೋಜನೆಯ ವಿರುದ್ಧ ಸಾಕ್ಷಿ ನುಡಿದಿದ್ದರೂ ಅವರುಗಳನ್ನು ಪ್ರತಿಕೂಲ ಸಾಕ್ಷಿಗಳಾಗಿ ಪರಿಗಣಿಸಿ ಪಾಟೀ ಸವಾಲು ಮಾಡದೇ, 2) ಸದರಿ ಸಾಕ್ಷಿದಾರರು ನ್ಯಾಯಾಲಯದಲ್ಲಿ ಪ್ರತಿಜ್ಞೆಯ ಮೇರೆಗೆ ಮುಖ್ಯ ವಿಚಾರಣೆಯಲ್ಲಿ ಅಭಿಯೋಜನೆ ಪರವಾಗಿ ಸಾಕ್ಷ್ಯ ನುಡಿದ ಸಾಕ್ಷ್ಯಕ್ಕೆ ವಿರುದ್ಧವಾಗಿ ಆರೋಪಿ ಪರ ವಕೀಲರ ಪಾಟೀ ಸವಾಲಿನ ಸಮಯಕ್ಕೆ ವಿರುದ್ಧ ಸಾಕ್ಷ್ಯವನ್ನು ನುಡಿದಿರುವುದರಿಂದ ಮಾಡುವಾಗ ಸಂಪೂರ್ಣವಾಗಿ ಅಭಿಯೋಜನೆಯ ಸಾಕ್ಷಿ ನುಡಿದಿರುವುದರಿಂದ ನ್ಯಾಯಾಲಯದ ಮುಂದೆ ಸುಳ್ಳು ಸಾಕ್ಷ್ಯ ನೀಡಿದ ಬಗ್ಗೆ ಸದರಿಯವರ ಮೇಲೆ ಶಿಕ್ಷಾರ್ಹ ಅಪರಾಧಕ್ಕಾಗಿ ಯಾವುದೇ ಕ್ರಮ ಕೈಗೊಳ್ಳದೇ, 3) ಈ ಕುರಿತು ಯು.ಡಿ.ಆರ್.ಸಂ.2/99ರ ಮೊಕದ್ದಮೆಗೆ ಸಂಬಂದಿಸಿದ ಪಿರ್ಯಾದು, ಪ್ರಥಮ ವರ್ತಮಾನ ವರದಿ, ಮತ್ತು ಸಂಗ್ರಹಿಸಿದ ಸಾಕ್ಷ್ಯಾಧಾರಗಳನ್ನು ನ್ಯಾಯಾಲಯದಲ್ಲಿ ಹಾಜರುಪಡಿಸದೇ-ಬೇಜವಾಬ್ದಾರಿತನದಿಂದ ವರ್ತಿಸಿ ಕರ್ತವ್ಯಲೋಪ ಎಸಗಿ ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಗಳು 1966ರ ನಿಯಮ 3 (ii) ಮತ್ತು 3 (iii) ನ್ನು ಉಲ್ಲಂಘಿಸಿರುವುದರಿಂದ ಇವರ ವಿರುದ್ಧ ಕ್ರಮ ಜರುಗಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಮೇಲೆ (2)ರಲ್ಲಿ ಓದಲಾಗಿರುವ ದಿನಾಂಕ:10.1.03ರ ಕಾರಣ ಕೇಳುವ ತಿಳುವಳಿಕೆ ಪತ್ರದಲ್ಲಿ ಶ್ರೀ ಎಂ.ಬಿ. ಯಂಕಂಚಿ, 2ನೇ ಅಧಿಕ ಸರ್ಕಾರಿ ಅಭಿಯೋಜಕರು, ಧಾರವಾಡ ಇವರಿಗೆ ಕಾರಣ ಕೇಳುವ ತಿಳುವಳಿಕೆ ಪತ್ರದೊಂದಿಗೆ ದೋಷಾರೋಪಣ ಪಟ್ಟಿ ಅನುಬಂಧ-1 ಮತ್ತು 4ನ್ನು ಜಾರಿ ಮಾಡಿ ತಮ್ಮ ಮೇಲಿನ ಆಪಾದನೆಗಳನ್ನು ಒಪ್ಪಿಕೊಳ್ಳುವ ಅಥವಾ ನಿರಾಕರಿಸುವ ಬಗ್ಗೆ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ತಿಳಿಸಲಾಗಿದ್ದಿತು.

ಮೇಲೆ (3)ರಲ್ಲಿ ಓದಲಾಗಿರುವ 29.1.03ರ ಪತ್ರದಲ್ಲಿ ಆರೋಪಿತ ಅಧಿಕಾರಿಯು ಲಿಖಿತ ಹೇಳಿಕೆಯನ್ನು ಸಲ್ಲಿಸಿ ತಮ್ಮ ಮೇಲೆ ಮಾಡಿರುವ ಎಲ್ಲ 3 ಆಪಾದನೆಗಳನ್ನು ಅಲ್ಲಗಳೆದು, ಉದ್ದೇಶಿತ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಕೋರಿರುತ್ತಾರೆ.

ಆದರೆ ಆರೋಪಿತ ಅಧಿಕಾರಿಯ ವಿವರಣೆ ಸಮಂಜಸವಾಗಿಲ್ಲದೇ ಇದ್ದುದರಿಂದ ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ ಮೇಲೆ (4)ರಲ್ಲಿ ಓದಲಾಗಿರುವ 24.6.2003ರಲ್ಲಿ ಇಲಾಖಾ ವಿಚಾರಣಾಧಿಕಾರಿಯನ್ನು ನೇಮಿಸಿ ಆದೇಶ ಹೊರಡಿಸಲಾಗಿದೆ. ಕಾರಣಾಂತರಗಳಿಂದ ವಿಚಾರಣಾಧಿಕಾರಿಯವರನ್ನು ಬದಲಾಯಿಸಿ ಮೇಲೆ (5)ರಲ್ಲಿ ಓದಲಾಗಿರುವ 10.10.2003ರಲ್ಲಿ ಬೇರೆ ಇಲಾಖಾ ವಿಚಾರಣಾಧಿಕಾರಿಯನ್ನು ನೇಮಿಸಿ ಆದೇಶ ಹೊರಡಿಸಲಾಗಿದೆ.

ವಿಚಾರಣಾಧಿಕಾರಿಯವರು ಮೇಲೆ 6ರಲ್ಲಿ ಓದಲಾಗಿರುವ ಪತ್ರದೊಡನೆ ಇಲಾಖಾ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ವರದಿಯಲ್ಲಿ ವಿಚಾರಣಾಧಿಕಾರಿಯವರು ಆಪಾದಿತ ಸರ್ಕಾರಿ ಅಧಿಕಾರಿಯ ಮೇಲೆ ಮಾಡಲಾಗಿರುವ ಎಲ್ಲಾ 3 ಆಪಾದನೆಗಳೂ ದೃಢಪಟ್ಟಿರುವುದಾಗಿ ನಿಷ್ಕರ್ಷೆ ನೀಡಿರುತ್ತಾರೆ.

ಮೇಲೆ (7) ರಲ್ಲಿ ಓದಲಾಗಿರುವ 28.1.2006ರ 2ನೇ ಕಾರಣ ಕೇಳುವ ತಿಳುವಳಿಕೆ ಪತ್ರದೊಂದಿಗೆ ಇಲಾಖಾ ವಿಚಾರಣಾ ವರದಿಯ ಪ್ರತಿಯನ್ನು ಆರೋಪಿತ ಸರ್ಕಾರಿ ಅಧಿಕಾರಿಗೆ ಒದಗಿಸಿ ಅವರ ಹೇಳಿಕೆಯನ್ನು ನೀಡಲು 30 ದಿನಗಳ ಕಾಲಾವಕಾಶವನ್ನು ನೀಡಲಾಗಿತ್ತು.

ಆರೋಪಿತ ಸರ್ಕಾರಿ ಅಧಿಕಾರಿಯು ಮೇಲೆ (8)ರಲ್ಲಿ ಓದಲಾಗಿರುವ 6.3.2006 ರಂದು ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸಿ ತಮ್ಮ ಮೇಲೆ ಮಾಡಿರುವ 3 ಆಪಾದನೆಗಳು ಮತ್ತೊಮ್ಮೆ ನಿರಾಕರಿಸಿರುತ್ತಾರೆ. ಒಂದು ವೇಳೆ ಆರೋಪಗಳನ್ನು ಗಣನೆಗೆ ತೆಗೆದುಕೊಂಡರೂ ಉದ್ದೇಶಪೂರ್ವಕವಾಗಿ ತಪ್ಪಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ. ತಾವು ದಿನಾಂಕ: 31.5.07 ರಂದು ನಿವೃತ್ತರಾಗಲಿದ್ದು ಅಂತಿಮವಾಗಿ ಕ್ಷಮಿಸಲು ಕೋರಿರುತ್ತಾರೆ.

ಆದುದರಿಂದ ಸದರಿ ಆರೋಪಿತ ಸರ್ಕಾರಿ ಅಧಿಕಾರಿಯ ಮೇಲೆ ಕರ್ನಾಟಕ ಸರ್ಕಾರ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8 (viii)ರ ಅಡಿಯಲ್ಲಿ ಮುಂದಿನ 1 ವಾರ್ಷಿಕ ವೇತನ ಬಡ್ತಿ ಸಂಚಿತ ಪರಿಣಾಮ ರಹಿತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸುವ ಬಗ್ಗೆ ನೇಮಕಾತಿ ಪ್ರಾಧಿಕಾರಿ ಮತ್ತು ಶಿಸ್ತಿನ ಪ್ರಾಧಿಕಾರಿಯು ನಿರ್ಣಯಿಸಿರುತ್ತಾರೆ. ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 967 ಪಿಪೀ 2005, ಬೆಂಗಳೂರು, ದಿನಾಂಕ: 17ನೇ ಅಕ್ಟೋಬರ್ 2006**

ಶ್ರೀ ಎಂ.ಬಿ. ಯಂಕಂಚಿ, 2ನೇ ಅಧಿಕ ಸರ್ಕಾರಿ ಅಭಿಯೋಜಕರು, ಧಾರವಾಡ ಇವರ ವಿರುದ್ಧ ಪ್ರಸ್ತಾವನೆಯಲ್ಲಿ ಮಾಡಲಾಗಿರುವ ಆಪಾದನೆಗಳು ಸಾಬೀತಾಗಿರುವುದರಿಂದ ಇವರ ವಿರುದ್ಧ ಕರ್ನಾಟಕ ಸರ್ಕಾರ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8 (viii)ರಲ್ಲಿ ನಮೂದಿಸಿರುವ ದಂಡನೆಯ್ನು ವಿಧಿಸಿ ಸದರಿ ಅಧಿಕಾರಿಯ ದಿನಾಂಕ: 1.3.2007 ರಂದು ಸಂಭವಿಸುವ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮರಹಿತವಾಗಿ 30.4.2007ರವರೆಗೆ ತಡೆಹಿಡಿದು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಿಸಾರ್ ಅಹಮದ್**

ಪಿ.ಆರ್. 1537

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಅಭಿಯೋಗಗಳು)

## INFRASTRUCTURE DEVELOPMENT SECRETARIAT

**Sub:** Release of funds for acquisition of additional land for BIAP- Permission to utilize the balance funds available with KSIIDC-reg.

**Read:** 1. Letter No. AGM (BIAP) 1757/2006-07 dated 7.8.2006 of the CMD, KSIIDC.
2. G.O. No. IDD 79 DIA 2006 dated :9.10.2006.

**Preamble:-**

In letter dated 7.8.2006 read above, the CMD, KSIIDC has stated that the final Notification under section 28 (4) of KIAD Act has been issued for acquiring 164.35 acres of additional land required for the Trumpet Interchange, the access road to the airport and for accommodating the second runway, Based on the recommendations of the advisory committee headed by the concerned Deputy Commissioner on the compensation to be paid to the landowners, KIADB has requested to provide Rs. 49.49 crores towards payment of compensation excluding the cost of Malkies and structures to be decided separately. Further, it is stated that it will be necessary to take into the consideration the cost involved towards acquisition of 2 acres 3 guntas identified at the time of joint measurement and 32 acres 11.5 guntas in Gangamuthanahalli village for which final Notification is not yet issued, thus making the total extent of additional land involved to 199 acres and 9.5 guntas for which payment of compensation has to be made. Out of the above, 122 acres 13 guntas are towards access road and for accommodating the second runway which are required to be handed over to BIAL. Of the remaining portion, 44 acres 25 guntas is meant for Trumpet Interchange and 32 acres 11.5 guntas is for housing/ residential purposes.

2. To meet the cost towards acquisition of these additional lands KSIIDC had requested sanction of Government to utilize the following funds available with KSIIDC

a) The balance amount of Rs. 24.54 crores available out of the Rs. 150.00 crores loan availed from HUDCO.
b) Rs. 4.38 crores released by Government of Karnataka to Hochtief (the losing bidder) towards bid preparation cost, which has been subsequently included in the project cost and reimbursed by BIAL to KSIIDC.
c) Rs. 3.65 crores released by Government of Karnataka to BIAL at the time of formation of BIAL, which was kept with BIAL as share application money and subsequently returned to KSIIDC.

3. With the above KSIIDC had stated that it would still have a residual gap of Rs. 3.76 crores to meet the total cost of acquisition and had sought to provide the balance amount of Rs 3.76 crores out of the budgetary allocation Infrastructure Development Department.

4. In G.O. dated 9.10.2006 read above, sanction was accorded for release of Rs 3.76 crores to meet the shortage of funds available with KSIIDC for acquisition of additional land, pending examination of the issue relating to utilisation of balance funds.

5. Government have examined the proposal of KSIIDC for utilisation of the balance funds of Rs. 32.57 crores available with them as explained above for the purpose of additional land acquisition and accordingly the following orders are issued.

**Government No IDD 79 DIA 2006, Bangalore Dated: 12th October 2006**

After careful examination of the above proposal, Government sanction is hereby accorded to KSIIDC for utilisation of the following balance funds avaible with KSIIDC towards acquisition of additional lands mentioned in the preamble portion to this order for Bangalore International Airport Project:

1) The balance amount of Rs. 24.54 crores available out of the Rs. 150.00 crores loan availed from HUDCO.
2) Rs. 4.38 crores released by Government of Karnataka to Hochtief (the losing bidder) towards bid preparation cost, which has been subsequently included in the project cost and reimbursed by BIAL to KSIIDC.
3) Rs. 3.65 crores released by Government of Karnataka to BIAL at the time of formation of BIAL, which was kept with BIAL as share application money and subsequently returned to KSIIDC.

By Order and in the name of the Governor of Karnataka,

**N. MANJULA GEETHA**

P.R. 1501

Under Secretary to Government,
Infrastructure Development Department

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ:** ಕರ್ನಾಟಕ ಮೂಲಸೌಲಭ್ಯ ಅಭಿವೃದ್ಧಿ ಸಂಸ್ಥೆಯ (ಐಡೆಕ್) ಯೋಜನಾ ಅಭಿವೃದ್ಧಿ ನಿಧಿ (PDF) ಹಾಗೂ ಯೋಜನಾ ಬಂಡವಾಳ ನಿಧಿ (PIF) ಗಳಿಗೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಮೂಅಇ 2 ರಾಅವಿ 2001, ದಿನಾಂಕ:20.3.2001.
2. ಸರ್ಕಾರದ ಆದೇಶ ಸಂಖ್ಯೆ: ಮೂಅಇ 124 ಮೂಇವಿ 2000, ದಿನಾಂಕ:6.10.2001.
3. ಸರ್ಕಾರದ ಆದೇಶ ಸಂಖ್ಯೆ: ಮೂಅಇ 81 ಮೂಇವಿ 2002, ದಿನಾಂಕ: 6.7.2002.
4. ಸರ್ಕಾರದ ಆದೇಶ ಸಂಖ್ಯೆ: ಮೂಅಇ 148 ಮೂಇವಿ 2002, ದಿನಾಂಕ:22.10.2002.
5. ಸರ್ಕಾರದ ಆದೇಶ ಸಂಖ್ಯೆ: ಮೂಅಇ 148 ಮೂಇವಿ 2002, ದಿನಾಂಕ:21.2.2003.
6. ಸರ್ಕಾರದ ಆದೇಶ ಸಂಖ್ಯೆ: ಮೂಅಇ 148 ಮೂಇವಿ 2002, ದಿನಾಂಕ:31.3.2003.
7. ಸರ್ಕಾರದ ಆದೇಶ ಸಂಖ್ಯೆ: ಮೂಅಇ 29 ಮೂಇವಿ 2002 (P) ದಿನಾಂಕ:4.11.2003.
8. ಸರ್ಕಾರದ ಆದೇಶ ಸಂಖ್ಯೆ: ಮೂಅಇ 63 ರಾರಾಹೆ 2003, ದಿನಾಂಕ:14. 9.2004.
9. ಸರ್ಕಾರದ ಆದೇಶ ಸಂಖ್ಯೆ: ಮೂಅಇ 74 ರಾರಾಹೆ 2005, ದಿನಾಂಕ:10.3.2006.
10. ವ್ಯವಸ್ಥಾಪಕ ನಿರ್ದೇಶಕರು ಹಾಗೂ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು, ಐಡೆಕ್ ಇವರ ಪತ್ರಗಳ ಸಂಖ್ಯೆ. iDeck/2006-07/227 ದಿನಾಂಕ:7.8.2006 ಹಾಗೂ iDeck/2006-07/228 ದಿನಾಂಕ 31.8.2006.
11. ವ್ಯವಸ್ಥಾಪಕ ನಿರ್ದೇಶಕರು ಹಾಗೂ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು, ಐಡೆಕ್ ಇವರ ಪತ್ರ ಸಂಖ್ಯೆ iDeck/2006-07/658 ದಿನಾಂಕ:9.10.2006.

**ಪ್ರಸ್ತಾವನೆ:**

ಮೇಲಿನ ಕ್ರಮ ಸಂಖ್ಯೆ 1 ರಿಂದ 9ರಲ್ಲಿ ಓದಲಾಗಿರುವ ಸರ್ಕಾರದ ಆದೇಶಗಳಡಿಯಲ್ಲಿ ಕರ್ನಾಟಕ ಸರ್ಕಾರವು ಕರ್ನಾಟಕ ಮೂಲಸೌಲಭ್ಯ ಅಭಿವೃದ್ಧಿ ಸಂಸ್ಥೆ(ಐಡೆಕ್)ಗೆ ಷೇರುದಾರರ ಒಪ್ಪಂದದಲ್ಲಿ ಅವಕಾಶವಿರುವಂತೆ ಐಡೆಕ್‌ನ ಯೋಜನಾ ಅಭಿವೃದ್ಧಿ ಹಾಗೂ ಯೋಜನಾ ಬಂಡವಾಳ ನಿಧಿಗಳಿಗೆ (PDF& PIF) ಮೂಲಸೌಲಭ್ಯ ಉಪಕ್ರಮ ನಿಧಿ (IIF) ಯಿಂದ ರಾಜ್ಯದಲ್ಲಿನ ಆಯ್ದ ಹಾಗೂ ಐಡೆಕ್‌ನ ಕಾರ್ಯಕಾರಿ ಸಮಿತಿ ಹಾಗೂ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯಿಂದ ಅನುಮೋದನೆಗೊಂಡ ರಾಜ್ಯದ ಮೂಲಸೌಲಭ್ಯ ಯೋಜನೆಗಳ ಅಭಿವೃದ್ಧಿಗಾಗಿ ಐಡೆಕ್ ಸಂಸ್ಥೆಯು ಭಾಗವಹಿಸಲು ಸರ್ಕಾರವು ಇದುವರೆವಿಗೂ ಒಟ್ಟಾರೆ ರೂ. 27.35 ಕೋಟಿಗಳ ಅನುದಾನವನ್ನು ಆಯವ್ಯಯದಿಂದ ಬಿಡುಗಡೆ ಮಾಡಿರುತ್ತದೆ.

2. ಕ್ರಮ ಸಂಖ್ಯೆ. 10 ರಲ್ಲಿ ಓದಲಾಗಿರುವ ವ್ಯವಸ್ಥಾಪಕ ನಿರ್ದೇಶಕರು ಹಾಗೂ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಐಡೆಕ್ ಇವರ ಪತ್ರಗಳಲ್ಲಿ ಪ್ರಸ್ತುತ ಸಾಲಿನ ಆಯವ್ಯಯದಲ್ಲಿ ಒದಗಿಸಲಾಗಿರುವ ರೂ. 50.00 ಲಕ್ಷಗಳ ಒದಗಣೆಯನ್ನು ಐಡೆಕ್ ಸಂಸ್ಥೆಗೆ ರಾಜ್ಯದಲ್ಲಿನ ಮುಂದುವರಿದ ಮೂಲಸೌಲಭ್ಯ ಯೋಜನೆಗಳಲ್ಲಿ ತೊಡಗಿಸಲು ಅತ್ಯಗತ್ಯವಾಗಿ ಬೇಕಾಗಿರುತ್ತದೆಂದು, ಅಭಿವೃದ್ಧಿ ಯೋಜನೆಗಳಾದ ಬೆಂಗಳೂರು ಮೈಸೂರು ರಾಜ್ಯ ಹೆದ್ದಾರಿ ಪಕ್ಕ ಸರ್ವೀಸ್ ರಸ್ತೆ, ಬಳ್ಳಾರಿ ಬೈಪಾಸ್ ರಸ್ತೆ ಮತ್ತು ಕೆಮ್ಮಣ್ಣ ಗುಂಡಿ, ಮರವಂತೆ, ಬೇಲೂರು ಮತ್ತು ಪಟ್ಟದಕಲ್ ಪ್ರದೇಶಗಳಲ್ಲಿ ಪ್ರವಾಸೋದ್ಯಮ ಯೋಜನಾ ಅಭಿವೃದ್ಧಿ ಪ್ರಸ್ತಾವನೆಗಳಿಗೆ ದಿನಾಂಕ:19.7.2006 ರಂದು ನಡೆದ ಬೋರ್ಡ್ ಆಫ್ ಡೈರೆಕ್ಟರ್‌ಗಳ ಸಭೆಯಲ್ಲಿ ಅನುಮೋದನೆ ನೀಡಿರುವ ಹಿನ್ನಲೆಯಲ್ಲಿ ಹಣ ತೊಡಗಿಸಬೇಕಾಗಿರುವುದರಿಂದ 2006-07ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾಗಿರುವ ರೂ. 50.00 ಲಕ್ಷಗಳನ್ನು ಶೀಘ್ರವಾಗಿ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. 2005-06ನೇ ಸಾಲಿನಲ್ಲಿ ಮೂಲಸೌಲಭ್ಯ ಅಭಿವೃದ್ಧಿ ಯೋಜನೆಗಾಗಿ ಬಿಡುಗಡೆಯಾದ ರೂ. 5.00 ಲಕ್ಷಗಳನ್ನು ಬಳಕೆ ಮಾಡಿದ ಬಗ್ಗೆ ವಿವರಗಳನ್ನು ದಿನಾಂಕ: 9.10.2006ರ ತಮ್ಮ ಪತ್ರದಲ್ಲಿ ಐಡೆಕ್ ಸಂಸ್ಥೆಯು ಒದಗಿಸಿದೆ.

3. ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಮೂಅಇ 74 ರಾರಾಹೆ 2005, ಬೆಂಗಳೂರು, ದಿನಾಂಕ: 10ನೇ ಅಕ್ಟೋಬರ್ 2006**

ಮೇಲೆ ವಿವರಿಸಿದಂತೆ 2006-07ನೇ ಸಾಲಿನಲ್ಲಿ ಕರ್ನಾಟಕ ಮೂಲಸೌಲಭ್ಯ ಅಭಿವೃದ್ಧಿ ಸಂಸ್ಥೆಯು (iDeck) ರಾಜ್ಯದ ಅನುಮೋದಿತ ಮೂಲಸೌಲಭ್ಯ ಯೋಜನೆಗಳ ಅಭಿವೃದ್ಧಿ ವೆಚ್ಚ ಹಾಗೂ ಬಂಡವಾಳ ವೆಚ್ಚಗಳನ್ನು ತೂಗಿಸಲು ಅನುಕೂಲವಾಗುವಂತೆ, 2006-07ನೇ ಸಾಲಿನಲ್ಲಿ ಒದಗಿಸಿರುವ ರೂ. 50.00 ಲಕ್ಷಗಳನ್ನು (ರೂ. ಐವತ್ತು ಲಕ್ಷಗಳು) ಮಾತ್ರ ಸದರಿ ಸಂಸ್ಥೆಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

2. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 5465-01-190-1-01-211 ಕರ್ನಾಟಕ ಮೂಲಸೌಲಭ್ಯ ಅಭಿವೃದ್ಧಿ ಸಂಸ್ಥೆ ನಿಯಮಿತ (ಐಡೆಕ್) ಬಂಡವಾಳ (ಯೋಜನೆ) - 2006-07 ಇದರಿಂದ ಭರಿಸತಕ್ಕದ್ದು.

3. ವ್ಯವಸ್ಥಾಪಕ ನಿರ್ದೇಶಕರು, ಐಡೆಕ್, ಬೆಂಗಳೂರು ಇವರು Payees ರಸೀದಿಯ ಮೂಲಕ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ರುಜುವನ್ನು ಪಡೆದು ಈ ಮೊತ್ತವನ್ನು ಪಡೆದುಕೊಳ್ಳಲು ಅಧಿಕಾರವನ್ನು ನೀಡಲಾಗಿದೆ.

4. ಆರ್ಥಿಕ ಇಲಾಖೆಯು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಸರ್ಕಾರದ ಆದೇಶ ಸಂಖ್ಯೆ: FD 1 TFP ದಿನಾಂಕ:10.7.1996 ಹಾಗೂ FD 1 TFP 2003, ದಿನಾಂಕ12.6.2003 ಇವುಗಳ ಮೂಖೇನ ಪ್ರತ್ಯಾಯೋಜಿಸಿರುವ ಅಧಿಕಾರವನ್ನು ಚಲಾಯಿಸಿ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಂಜುಳಗೀತ**

ಪಿ.ಆರ್. 1502

ಅಧೀನ ಕಾರ್ಯದರ್ಶಿ,

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ವಿಶೇಷ ಜ್ಯುಡಿಷಿಯಲ್ ಮ್ಯಾಜಿಸ್ಟ್ರೇಟ್ ಮತ್ತು ವಿಶೇಷ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ ಇವರ ಗೌರವ ಧನ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ ಲಾ 69 ಎಲ್ಎಜಿ 94 ದಿನಾಂಕ: 8.1.1996.

2. ಪತ್ರ ಸಂಖ್ಯೆ ಜಿಓಬಿ (I) 419/1993 ದಿನಾಂಕ:9.8.2006.

**ಪ್ರಸ್ತಾವನೆ:**

ವಿಶೇಷ ಜ್ಯುಡಿಷಿಯಲ್ ಮ್ಯಾಜಿಸ್ಟ್ರೇಟ್ ಮತ್ತು ವಿಶೇಷ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ ಈ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುವ ನಿವೃತ್ತ ನ್ಯಾಯಾಂಗ ಅಧಿಕಾರಿಗಳಿಗೆ ತಿಂಗಳಿಗೆ ಕ್ರಮವಾಗಿ ರೂ. 1,500-00 ಮತ್ತು ರೂ. 1200-00 ಮೊತ್ತದ ಗೌರವ ಧನ ಪಾವತಿಸಲು ಮೇಲೆ(1)ರಲ್ಲಿ ಓದಲಾದ ಆದೇಶದಲ್ಲಿ ಮಂಜೂರಾತಿ ನೀಡಲಾಗಿತ್ತು.

ಈ ಮೊತ್ತಗಳು ಕಡಿಮೆ ಇರುವುದರಿಂದ ನಿವೃತ್ತ ನ್ಯಾಯಾಂಗ ಅಧಿಕಾರಿಗಳು ಸದರಿ ಹುದ್ದೆಗಳಲ್ಲಿ ಕಾರ್ಯನಿರ್ವಹಿಸಲು ಇಚ್ಛಿಸುತ್ತಿಲ್ಲ ಎಂಬುದಾಗಿ ತಿಳಿಸುತ್ತಾ, ಅಂತಹ ಮೊತ್ತವನ್ನು ರೂ. 2500-00 ಗಳಿಗೆ ಹೆಚ್ಚಿಸಲು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಈ ಹಿನ್ನಲೆಯಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಲಾ 58 ಎಲ್ಎಸಿ 2006, ಬೆಂಗಳೂರು, ದಿನಾಂಕ:12ನೇ ಅಕ್ಟೋಬರ್ 2006**

ಜ್ಯುಡಿಷಿಯಲ್ ಮ್ಯಾಜಿಸ್ಟ್ರೇಟ್ ಮತ್ತು ವಿಶೇಷ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ ಈ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುವ ನಿವೃತ್ತ ನ್ಯಾಯಾಂಗ ಅಧಿಕಾರಿಗಳ ಮಾಸಿಕ ಗೌರವ ಧನವನ್ನು ರೂ. 2500-00 (ಎರಡು ಸಾವಿರದ ಐದು ನೂರು ರೂಪಾಯಿಗಳು ಮಾತ್ರ)ಗಳಿಗೆ ಹೆಚ್ಚಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಆ ಸಂಬಂಧದ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2014-00-108-0-01 (ಯೋಜನೇತರ)ರ ಅಡಿ ಭರಿಸುವುದು.

ಇದಕ್ಕೆ ಆರ್ಥಿಕ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ ಆಇ 885 ವೆಚ್ಚ- 7/06 ದಿನಾಂಕ:3.10.2006 ರಲ್ಲಿ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗಂಗನರಸಯ್ಯ**

ಪಿ.ಆರ್. 1539

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-1),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಬಿ. ಮಹದೇವಯ್ಯ, ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು. ನಿಯೋಜನೆ ಮೇಲೆ ಈ ಹಿಂದೆ ತಾಲ್ಲೂಕು ಕಾರ್ಯನಿರ್ವಾಹಕ ಅಧಿಕಾರಿ, ನರಸಿಂಹರಾಜಪುರ ಇವರ ವಿರುದ್ಧದ ಶಿಸ್ತು ಕ್ರಮಗಳ ಬಗ್ಗೆ.

**ಓದಲಾಗಿದೆ:** 1. ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ಇವರ ಪತ್ರದ ಸಂ:ತೋಇ/ಆ/ಸಿ/10-2/101/03-04 ದಿನಾಂಕ:11.4.2005.

2. ಸರ್ಕಾರದ ಪತ್ರ ಸಂ:ಕೃತೋಇ 373 ತೋಸೇಪ 2004 ದಿನಾಂಕ:27.3.2006.

3. ಆರೋಪಿತ ಅಧಿಕಾರಿಯು ಸಲ್ಲಿಸಿರುವ ಪ್ರತಿ ರಕ್ಷಣಾ ಹೇಳಿಕೆಯ ಪತ್ರ.

4. ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ಇವರ ಪತ್ರದ ಸಂ: ತೋಇ/ಆ/ಸಿ/10-2/101/03-04 ದಿನಾಂಕ: 4.7.2006.

**ಪ್ರಸ್ತಾವನೆ:**

ಶ್ರೀ ಬಿ. ಮಹದೇವಯ್ಯ, ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು ಇವರು ನಿಯೋಜನೆ ಮೇಲೆ ಈ ಹಿಂದೆ ಕಾರ್ಯ ನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಟಿ. ನರಸೀಪುರದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಗ್ರಾಮ ಪಂಚಾಯಿತಿ ಸದಸ್ಯರ ಒಂದನೇ ಘಟ್ಟದ ಉಪಗ್ರಹ ಆಧಾರಿತ ತರಬೇತಿ ಕಾರ್ಯಕ್ರಮದ ಅನುಷ್ಠಾನಕ್ಕಾಗಿ ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಮೈಸೂರು ರವರಿಂದ ರೂ. 3,04, 600-00 ಗಳ ಅನುದಾನ ಬಿಡುಗಡೆಯಾಗಿದ್ದು, ಸದರಿ ಅನುದಾನದ ಬಳಕೆಯ ಬಗ್ಗೆ ಯಾವುದೇ ಲೆಕ್ಕ ಪತ್ರಗಳನ್ನು ನಿರ್ವಹಿಸದ ಕಾರಣ ಹಾಗೂ ಅನುದಾನದ ವೆಚ್ಚಗಳಿಗೆ ಪೂರಕ ವೋಚರ್‌ಗಳನ್ನು ಹಾಜರುಪಡಿಸದೇ ಇದ್ದು, ಇದರಿಂದಾಗಿ ಈ ಅನುದಾನ ದುರುಪಯೋಗವಾಗಿರುವ ಮತ್ತು ತರಬೇತಿ ಸಂಸ್ಥೆಯಿಂದ ಬಿಡುಗಡೆ ಮಾಡಿದ್ದ ಅನುದಾನವನ್ನು ತಾತ್ಕಾಲಿಕವಾಗಿ ದುರುಪಯೋಗಪಡಿಸಿಕೊಂಡಿರುವುದರಿಂದ ಇವರ ವಿರುದ್ಧದ ಆರೋಪಗಳ ಬಗ್ಗೆ ಮಹಾ ನಿರ್ದೇಶಕರು,ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಮೈಸೂರು ರವರು ಸದರಿ ಅಧಿಕಾರಿಯವರ ವಿರುದ್ಧದ ಆರೋಪ ಪಟ್ಟಿಯನ್ನು ಮೇಲೆ ಓದಲಾದ (1)ರ ಪತ್ರದಲ್ಲಿ ತೋಟಗಾರಿಕೆ ನಿರ್ದೇಶಕರು ಸಲ್ಲಿಸಿದ್ದಾರೆ.

ಮೇಲೆ ಓದಲಾದ (2)ರ ಸರ್ಕಾರಿ ಪತ್ರದಲ್ಲಿ ಶ್ರೀ ಬಿ. ಮಹದೇವಯ್ಯ, ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು ಇವರು ನಿಯೋಜನೆ ಮೇಲೆ ತಾಲ್ಲೂಕು ಕಾರ್ಯನಿರ್ವಾಹಕ ಅಧಿಕಾರಿ,ಸುರಪುರ ಇವರಿಗೆ ಸದರಿ ಪ್ರಕರಣದ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸುವಂತೆ ತಿಳಿಸಲಾಗಿದೆ. ದೋಷಾರೋಪಣಾ ಪಟ್ಟಿಯನ್ನು ಆರೋಪಿತ ಅಧಿಕಾರಿಯು ಪಡೆದು ತಮ್ಮ ಹೇಳಿಕೆಯಲ್ಲಿ ಸದರಿ ಆರೋಪಗಳನ್ನು ಅಲ್ಲಗಳೆದು ಆರೋಪಗಳನ್ನು ಕೈಬಿಡುವಂತೆ ಮೇಲೆ ಓದಲಾದ (3) ರ ತಮ್ಮ ಪತ್ರದಲ್ಲಿ ಕೋರಿದ್ದಾರೆ.

ಓದಲಾದ (4) ರ ತೋಟಗಾರಿಕೆ ನಿರ್ದೇಶಕರ ಪತ್ರದಲ್ಲಿ ಆರೋಪಿತ ಅಧಿಕಾರಿಯು ಆರೋಪಗಳನ್ನು ಅಲ್ಲಗಳೆದಿರುವುದರಿಂದ ಪ್ರಕರಣದ ಸತ್ಯಾಸತ್ಯತೆಯನ್ನು ಅರಿಯುವ ಸಲುವಾಗಿ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವಂತೆ ಕೋರಿದ್ದಾರೆ.

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 373 ತೋಸೇಪ 2004, ಬೆಂಗಳೂರು, ದಿನಾಂಕ: 10ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಬಿ. ಮಹದೇವಯ್ಯ, ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು ಹಾಲಿ ನಿಯೋಜನೆ ಮೇಲೆ ಹಿಂದಿನ ತಾಲ್ಲೂಕು ಪಂಚಾಯಿತಿ ಕಾರ್ಯನಿರ್ವಾಹಕ ಅಧಿಕಾರಿ, ನರಸಿಂಹರಾಜಪುರ, ಚಿಕ್ಕಮಗಳೂರು ಜಿಲ್ಲೆ ಇವರು ಗ್ರಾಮ ಪಂಚಾಯಿತಿ ಸದಸ್ಯರ ಉಪಗ್ರಹ ಆಧಾರಿತ ತರಬೇತಿಗೆ ನರಸಿಂಹರಾಜಪುರ ತಾಲ್ಲೂಕು ಪಂಚಾಯಿತಿಗೆ ಬಿಡುಗಡೆಯಾಗಿದ್ದ ಅನುದಾನ ನಿರ್ವಹಣೆಯಲ್ಲಿ ಆಗಿರುವ ಲೋಪಗಳಿಗೆ ಸಂಬಂಧಿಸಿದಂತೆ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು 1957 ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, ನಿಯಮ 11 ನೇ ನಿಯಮದ 2ನೇ ಉಪ ನಿಯಮ ಮತ್ತು 3ನೇ ಉಪ ನಿಯಮದ (ಸಿ) ಖಂಡದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರಾದ ಶ್ರೀ ನಂದಕುಮಾರ್ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶ್ರೀ ಟಿ.ಆರ್. ಶಾಮಣ್ಣ, ವ್ಯವಸ್ಥಾಪಕರು. ತೋಟಗಾರಿಕೆ ಉಪ ನಿರ್ದೇಶಕರು (ಜಿ.ಪಂ) ಕಚೇರಿ, ಮೈಸೂರು ಇವರನ್ನು ಮಂಡನಾಧಿಕಾರಿಯವರನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ತೋಟಗಾರಿಕೆ ನಿರ್ದೇಶಕರ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸುವ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು.ಹಾಗೆಯೇ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಾಗ್ರಿಗಳನ್ನು ಒದಗಿಸುವುದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಯವರಿಗೆ ನಿಯಮಾನುಸಾರ ಸಂಚಿತ ಸಂಭಾವನೆಯನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿದ ನಂತರ ತೋಟಗಾರಿಕೆ ನಿರ್ದೇಶಕರು ಪಾವತಿ ಮಾಡುವುದು.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು 3 ತಿಂಗಳೊಳಗಾಗಿ ಪೂರೈಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ರಾಜು**

ಪಿ.ಆರ್. 1520

ಸರ್ಕಾರದ ಅಧೀನ ಕಾರ್ಯದರ್ಶಿ (ತೋಟಗಾರಿಕೆ),
ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಶ್ರೀ ಎ. ಕೃಷ್ಣಪ್ಪ, ಹಿಂದಿನ ನಿರೀಕ್ಷಕರು ಮತ್ತು ಶ್ರೀ ಡಿ. ಪುಟ್ಟಸ್ವಾಮಿ, ದೈಹಿಕ ಸಹಾಯಕರು, ಕಾನೂನು ಮಾಪನಶಾಸ್ತ್ರ ಇಲಾಖೆ ಇವರ ವಿರುದ್ಧ ಮಾಡಲಾಗಿರುವ ಲಂಚದ ಆರೋಪದ ಬಗ್ಗೆ ಲೋಕಾಯುಕ್ತರಿಂದ ವಿಚಾರಣೆ ನಡೆಸಿ ದೋಷ ಮುಕ್ತರನ್ನಾಗಿ ಪರಿಗಣಿಸುವ ಬಗ್ಗೆ.

**ಓದಲಾಗಿದೆ:**
1. ನಿಬಂಧಕರು, ರಾಜ್ಯ ಲೋಕಾಯುಕ್ತ ಇಲಾಖೆ ಇವರ ಪತ್ರ ಸಂಖ್ಯೆ:Compt/Uplok/BCD/178/98-99/ PO-2 ಎಆರ್‌ಇ -1, ದಿನಾಂಕ:16.8.2000.
2. ಸರ್ಕಾರದ ಆದೇಶ ಸಂಖ್ಯೆ:ಆನಾಸ 82 ಕಾಮಾಸೇ 95 (ಭಾ-2), ದಿನಾಂಕ:21.11.2000.
3. ಉಪಲೋಕಾಯುಕ್ತರು, ಬೆಂಗಳೂರು ಇವರ ಪತ್ರಸಂಖ್ಯೆ: ಲೋಕ್/ಎಆರ್‌ಇ-1/ಇಎನ್‌ಕ್ಯೂ-37/2002-03, ದಿನಾಂಕ: 26.8.2006/ 4.9.2006.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ದಿನಾಂಕ: 16.8.2000ರಲ್ಲಿ ಶ್ರೀ ಎ. ಕೃಷ್ಣಪ್ಪ, ಹಿಂದಿನ ನಿರೀಕ್ಷಕರು ಹಾಗೂ ಶ್ರೀ ಡಿ. ಪುಟ್ಟಸ್ವಾಮಿ, ದೈಹಿಕ ಸಹಾಯಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಬೆಂಗಳೂರು ಇಲ್ಲಿ ಕೆಲಸ ನಿರ್ವಹಿಸುತ್ತಿದ್ದ ಸಮಯದಲ್ಲಿ ತಮ್ಮ ಅಧಿಕೃತ ಕರ್ತವ್ಯಗಳನ್ನು ನಿರ್ವಹಿಸುವಲ್ಲಿ ಅಂದರೆ ಬೆಂಗಳೂರಿನ ಇಂದಿರಾನಗರದ ಆರ್.ಕೆ. ಎಂಟರ್‌ಪ್ರೈಸಸ್‌ನ ಶ್ರೀ ಆರ್. ಕೆ. ರಷೀದುಲ್ಲಾ ರವರಿಂದ ಸ್ಕೇಲುಗಳ ಲೈಸನ್ಸ್ ಮುಂದುವರಿಸಲು ಹಾಗೂ ಸ್ಟಾಂಪಿಂಗ್ ಮಾಡಲು ರೂ. 1,000/- ಗಳನ್ನು ಲಂಚವಾಗಿ ಪಡೆದಿರುತ್ತಾರೆ. ಈ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ ತನಿಖೆ ಮಾಡಲು ಕರ್ನಾಟಕ ಲೋಕಾಯುಕ್ತ ಅಧಿನಿಯಮ 1984 ಸೆಕ್ಷನ್ 12(ಎ)ರಡಿ ಶಿಫಾರಸ್ಸು ಮಾಡಿರುತ್ತಾರೆ. ಲೋಕಾಯುಕ್ತ ನಿಬಂಧಕರು ಈ ಪ್ರಕರಣದಲ್ಲಿ ಕರ್ನಾಟಕ ಲೋಕಾಯುಕ್ತದ ಅಧಿನಿಯಮ 12(4) ರನ್ವಯ ಕ್ರಮ ತೆಗೆದುಕೊಳ್ಳುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಎ. ಕೃಷ್ಣಪ್ಪ, ಹಿಂದಿನ ನಿರೀಕ್ಷಕರು ಹಾಗೂ ಶ್ರೀ ಡಿ. ಪುಟ್ಟಸ್ವಾಮಿ, ದೈಹಿಕ ಸಹಾಯಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಬೆಂಗಳೂರು ಇವರ ವಿರುದ್ಧ ಮಾಡಲಾಗಿರುವ ಆರೋಪಗಳ ಬಗ್ಗೆ ಕರ್ನಾಟಕ ನಾಗರೀಕ ಸೇವೆಗಳು (ಸಿಸಿಎ) ನಿಯಮಾವಳಿಗಳು 1957ರ ನಿಯಮ 14(ಎ) ಮೇರೆಗೆ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಮಾನ್ಯ ಉಪಲೋಕಾಯುಕ್ತ, ಬೆಂಗಳೂರು ಇವರಿಗೆ ವಹಿಸಿಕೊಡಲಾಗಿತ್ತು.

ಮೇಲೆ (3) ರಲ್ಲಿ ಓದಲಾದ ಮಾನ್ಯ ಉಪಲೋಕಾಯುಕ್ತ, ಬೆಂಗಳೂರು ಇವರ ಪತ್ರದಲ್ಲಿ ಉಪಲೋಕಾಯುಕ್ತರವರ ದಿನಾಂಕ:27.7.2000ರ ಶಿಫಾರಸ್ಸು ಹಾಗೂ ಸರ್ಕಾರದ ಆದೇಶದಂತೆ ಉಪನಿಬಂಧಕರು, ವಿಚಾರಣೆಗಳು-1, ಇವರಿಗೆ ವಿಚಾರಣೆ ನಡೆಸಲು ಆದೇಶಿಸಿರುತ್ತಾರೆ. ವಿಚಾರಣಾಧಿಕಾರಿಗಳು, ವಿಚಾರಣೆಗಳು-1, ಕರ್ನಾಟಕ ಲೋಕಾಯುಕ್ತರವರ ದಿನಾಂಕ:22.8.2006ರ ವಿಚಾರಣಾ ವರದಿ ಆಧಾರದ ಮೇಲೆ ಮಾನ್ಯ ಉಪಲೋಕಾಯುಕ್ತರು ಶ್ರೀ ಎ. ಕೃಷ್ಣಪ್ಪ, ಹಿಂದಿನ ನಿರೀಕ್ಷಕರು ಹಾಗೂ ಶ್ರೀ ಡಿ. ಪುಟ್ಟಸ್ವಾಮಿ, ದೈಹಿಕ ಸಹಾಯಕರು, ಕಾನೂನು ಮಾಪನಶಾಸ್ತ್ರ ಇಲಾಖೆ ಇವರುಗಳ ವಿರುದ್ಧ ಲಂಚ ಸ್ವೀಕೃತ ಆರೋಪವು ವಿಚಾರಣೆಯಲ್ಲಿ ರುಜುವಾತಾಗಿರುವುದಿಲ್ಲವಾದ್ದರಿಂದ, ಈ ಪ್ರಕರಣವನ್ನು ಕೈಬಿಡಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ. ಆದ್ದರಿಂದ ಸರ್ಕಾರವು ಇವರನ್ನು ಆರೋಪಗಳಿಂದ ದೋಷಮುಕ್ತರನ್ನಾಗಿಸಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಆನಾಸ 56 ಕಾಮಾಸೇ 2006, ಬೆಂಗಳೂರು, ದಿನಾಂಕ: 21ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಮಾಹಿತಿಯನ್ವಯ ಶ್ರೀ ಎ. ಕೃಷ್ಣಪ್ಪ, ಹಿಂದಿನ ನಿರೀಕ್ಷಕರು ಹಾಗೂ ಶ್ರೀ ಡಿ. ಪುಟ್ಟಸ್ವಾಮಿ, ದೈಹಿಕ ಸಹಾಯಕರು, ಕಾನೂನು ಮಾಪನಶಾಸ್ತ್ರ ಇಲಾಖೆ ಇವರುಗಳ ಮೇಲೆ ಸರ್ಕಾರಿ ಆದೇಶ ಸಂಖ್ಯೆ:ಆನಾಸ 82 ಕಾಮಾಸೇ 95 (ಭಾ-2)

ದಿನಾಂಕ:21.11.2000ರಂತೆ ಕರ್ನಾಟಕ ನಾಗರಿಕ ಸೇವೆಗಳು (ಸಿಸಿಎ) ನಿಯಮಾವಳಿ 1957ರ ನಿಯಮ 14-ಎರನ್ವಯ ಪ್ರಾರಂಭಿಸಲಾದ ಇಲಾಖಾ ವಿಚಾರಣೆಯನ್ನು ಈ ಮೂಲಕ ಕೈ ಬಿಟ್ಟು ಆರೋಪಗಳಿಂದ ದೋಷಮುಕ್ತರನ್ನಾಗಿ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ವಿಶ್ವೇಶ್ವರಯ್ಯ**

ಪಿ.ಆರ್. 1544 ಪೀಠಾಧಿಕಾರಿ, ಆಹಾರ-1 ಶಾಖೆ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಶ್ರೀ ವೃಷಭರಾಜೇಂದ್ರಮೂರ್ತಿ, ಸಹಾಯಕ ನಿರ್ದೇಶಕರು, ಹಾಗೂ ಶ್ರೀ ಲಕ್ಷ್ಮೀನರಸಿಂಹಸ್ವಾಮಿ, ಆಹಾರ ನಿರೀಕ್ಷಕರು ಅನೌಪಚಾರಿಕ ಪಡಿತರ ಕಛೇರಿ, ಮೈಸೂರು ಇವರುಗಳ ಅಮಾನತ್ತಿನ ಬಗ್ಗೆ.

**ಓದಲಾಗಿದೆ:** 1. ಜಿಲ್ಲಾಧಿಕಾರಿಗಳು, ಮೈಸೂರು ಇವರ ಪತ್ರ ಸಂಖ್ಯೆ:ಬಿಪಿಎಲ್ ಪುನರ್ ಸಮೀಕ್ಷೆ/ತಾಪಕೂ/06-07, ದಿನಾಂಕ: 17.10.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ, ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರು ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯ ಉಪನಿರ್ದೇಶಕರ ಪತ್ರ ದಿನಾಂಕ:17.10.2006ರ ಪತ್ರವನ್ನು ಕಳುಹಿಸಿ, ದಿನಾಂಕ:16.10.2006ರಂದು ಮಾನ್ಯ ಉಪಮುಖ್ಯಮಂತ್ರಿಗಳು ಹಾಗೂ ಮಾನ್ಯ ಆಹಾರ ಮತ್ತು ನಾಗರೀಕ ಸರಬರಾಜು ಸಚಿವರು ಮೈಸೂರಿಗೆ ಬೇಟಿ ನೀಡಿದ ಸಂದರ್ಭದಲ್ಲಿ ಪಡಿತರ ಸಮೀಕ್ಷೆ ಕೂಪನ್ ವಿತರಣೆಯಲ್ಲಿ ಲೋಪದೋಷಗಳು ಉಂಟಾಗಿದೆ ಎಂದು ಪಟ್ಟಣ ಪ್ರದೇಶದ ಆದಾಯ ಮಿತಿ ರೂ.17, 000-ಗಳಿಗಿಂತ ಕಡಿಮೆ ವರಮಾನವಿರುವ ಫಲಾನುಭವಿಗಳು ಬಿಪಿಎಲ್ ಪಡಿತರ ಚೀಟಿಗೆ ಅರ್ಹರಾಗಿದ್ದರೂ ಸಹ ಎಪಿಎಲ್ ಪಡಿತರ ಚೀಟಿಗಳನ್ನು ವಿತರಿಸಿ ಹಾಗೂ ಎಪಿಎಲ್ ಪಡಿತರ ಚೀಟಿದಾರರಿಗೆ ಬಿಪಿಎಲ್ ಪಡಿತರ ಚೀಟಿಗಳನ್ನು ವಿತರಿಸಿರುವ ಬಗ್ಗೆ ಸಾರ್ವಜನಿಕ/ ಫಲಾನುಭವಿಗಳು ಮೌಖಿಕವಾಗಿ ದೂರು ನೀಡಿದ ಪ್ರಯುಕ್ತ, ಸದರಿ ದೂರಿನ ಬಗ್ಗೆ ಪರಿಶೀಲನೆ ಮಾಡಿದ ಸಂದರ್ಭದಲ್ಲಿ ಸಹಾಯಕ ನಿರ್ದೇಶಕರು ಹಾಗೂ ಆಹಾರ ನಿರೀಕ್ಷಕರು, ಅನೌಪಚಾರಿಕ ಪಡಿತರ ಪ್ರದೇಶ, ಮೈಸೂರು ನಗರ ಇವರನ್ನು ಕಾರಣ ಕೇಳಿ ನ್ಯಾಯಬೆಲೆ ಅಂಗಡಿಗಳ ಬಗ್ಗೆ ಸಾರ್ವಜನಿಕರು ನೀಡಿದ ದೂರಿನಂತೆ ತನಿಖೆಯನ್ನು ಏಕೆ ಕೈಗೊಂಡಿಲ್ಲ ಹಾಗೂ ನ್ಯಾಯಬೆಲೆ ಅಂಗಡಿಗಳ ಬಗ್ಗೆ ಏನು ಕ್ರಮ ಕೈಗೊಂಡಿದ್ದೀರಿ ಎಂಬುದಕ್ಕೆ ಯಾವುದೇ ಸಮಜಾಯಿಷಿಯನ್ನು ನೀಡಿದ ಕಾರಣ ಮಾನ್ಯ ಅನಾಸ ಸಚಿವರು ಇವರ ಕರ್ತವ್ಯ ನಿರ್ಲಕ್ಷ್ಯತೆ ಕಂಡು ಇವರ ಬಗ್ಗೆ ಸೂಕ್ತ ಕ್ರಮ ಕೈಗೊಂಡು ಅಮಾನತ್ತುಪಡಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಲು ಸೂಚಿಸಿರುತ್ತಾರೆಂದು ವರದಿ ಮಾಡಿರುತ್ತಾರೆ.

ಅಲ್ಲದೆ ವಾರ್ಡ್ ನಂ.3ರಲ್ಲಿ ದೂರು ನೀಡಿದ 9 ಜನ ಫಲಾನುಭವಿಗಳಾದ ಶ್ರೀ ಎಸ್. ಲೋಕೇಶ್, ಶ್ರೀ ಶಿವಣ್ಣ, ಶ್ರೀ ಬೈರ, ಶ್ರೀ ವೆಂಕಟೇಶ್, ಶ್ರೀ ಶಿವಕುಮಾರ್, ಶ್ರೀ ಮಂಜುನಾಥ್, ಶ್ರೀ ಮಹಮದ್ ಮನ್ಸೂರ್, ಶ್ರೀ ಮಲ್ಲಯ್ಯ ಮತ್ತು ಶ್ರೀ ಬಸವರಾಜು ಬಿ ಮತ್ತು ವಾರ್ಡ್ ನಂ. 8,9 ಮತ್ತು 12ರ ಶ್ರೀಮತಿ ದೊಡ್ಡಮ್ಮ ಶ್ರೀ ಪೆರುಮಾಳ ಶೆಟ್ಟಿ, ಶ್ರೀ ಸಿದ್ದಾಚಾರ್, ಶ್ರೀಮತಿ ಗೌರಮ್ಮ ಮತ್ತು ಶ್ರೀ ಜಯರಾಮು ಇವರುಗಳು ಬಿಪಿಎಲ್ ಪಡಿತರ ಚೀಟಿಗಳಿಗೆ ಅರ್ಹರಾಗಿದ್ದರೂ ಸಹ ಇವರುಗಳಿಗೆ ತಾತ್ಕಾಲಿಕ ಎಪಿಎಲ್ ಕಾರ್ಡುಗಳನ್ನು ವಿತರಿಸಿರುತ್ತಾರೆಂದು ತಿಳಿಸಿದ್ದಾರೆ. ಅಲ್ಲದೆ ಅದೇ ರೀತಿ ಕೆ.ಆರ್. ಮೊಹಲ್ಲಾ ವಾರ್ಡ್ ಸಂಖ್ಯೆ 3ರಲ್ಲಿ ಸುಮಾರು 34 ಜನ ಫಲಾನುಭವಿಗಳ ಪೈಕಿ ಕಡಿಮೆ ಆದಾಯ ಹೊಂದಿದ್ದವರಿಗೆ ಎಪಿಎಲ್ ಕಾರ್ಡುಗಳನ್ನೂ ಹಾಗೂ ಹೆಚ್ಚಿಗೆ ಆದಾಯ ಹೊಂದಿರುವವರಿಗೆ ಬಿಪಿಎಲ್ ಕಾರ್ಡುಗಳನ್ನು ವಿತರಿಸಿ ಲೋಪವೆಸಗಿದ್ದಾರೆಂದು ವರದಿ ಮಾಡಿರುತ್ತಾರೆ.ಹಾಗೇಯೇ ಸದರಿ ವಾರ್ಡಿನ ವ್ಯಾಪ್ತಿಯ ನೋಡಲ್ ಅಧಿಕಾರಿಯವರು ಸರ್ವೆ ನಂ. 1 ಮತ್ತು 2ನ್ನು ಪರಿಶೀಲಿಸದೇ ಇರುವುದು ಆಹಾರ ನಿರೀಕ್ಷಕರು ಹಾಗೂ ನಗರ ವ್ಯಾಪ್ತಿಯ ಆಹಾರ ಇಲಾಖೆಯ ಪಡಿತರ ಅಧಿಕಾರಿಗಳು ಚೆಕ್ ಲಿಸ್ಟ್ ಮತ್ತು ಪ್ರಪತ್ರ 3ನ್ನು ಪರಿಶೀಲಿಸದೇ ಕರ್ತವ್ಯ ಲೋಪವೆಸಗಿರುತ್ತಾರೆಂದು ವರದಿ ಮಾಡಿರುತ್ತಾರೆ.

ಜಿಲ್ಲಾಧಿಕಾರಿಗಳು, ಮೈಸೂರು ಇವರ ವರದಿಯನ್ನಾಧರಿಸಿ, ಮೈಸೂರು ಅನೌಪಚಾರಿಕ ಪಡಿತರ ಕಛೇರಿಯ ಸಹಾಯಕ ನಿರ್ದೇಶಕರಾದ ಶ್ರೀ ವೃಷಭರಾಜೇಂದ್ರ ಮೂರ್ತಿ ಹಾಗೂ ಆಹಾರ ನಿರೀಕ್ಷಕರಾದ ಶ್ರೀ ಲಕ್ಷ್ಮೀನಾರಾಯಣಸ್ವಾಮಿ ಇವರುಗಳ ಕರ್ತವ್ಯ ನಿರ್ಲಕ್ಷ್ಯತೆಯಿಂದ ಹಲವಾರು ಗೊಂದಲಗಳು ನಿರ್ಮಾಣವಾಗಿರುವುದು ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ, ಈ ಇಬ್ಬರನ್ನು ಅಮಾನತ್ತಿನಲ್ಲಿಡುವ ಬಗ್ಗೆ ಸರ್ಕಾರ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅನಾಸ 169 ಅಇಸೇ 2006, ಬೆಂಗಳೂರು, ದಿನಾಂಕ: 19ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಶ್ರೀ ವೃಷಭರಾಜೇಂದ್ರಮೂರ್ತಿ, ಸಹಾಯಕ ನಿರ್ದೇಶಕರು, ಅನೌಪಚಾರಿಕ ಪಡಿತರ ಕಛೇರಿ, ಮೈಸೂರು ಹಾಗೂ ಶ್ರೀ ಲಕ್ಷ್ಮೀನರಸಿಂಹಸ್ವಾಮಿ, ಆಹಾರ ನಿರೀಕ್ಷಕರು, ಅನೌಪಚಾರಿಕ ಪಡಿತರ ಕಛೇರಿ, ಮೈಸೂರು ಇವರುಗಳನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(1)(ಡಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಅವರುಗಳ ವಿರುದ್ಧದ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ.

ಶ್ರೀ ವೃಷಭರಾಜೇಂದ್ರಮೂರ್ತಿ ಹಾಗೂ ಶ್ರೀ ಲಕ್ಷ್ಮೀನರಸಿಂಹಸ್ವಾಮಿ ಇವರುಗಳು ಅಮಾನತ್ತಿನ ಅವಧಿಯಲ್ಲಿ ಸಕ್ಷಮ ಪ್ರಾಧಿಕಾರದ ಅನುಮತಿಯನ್ನು ಪಡೆಯದೇ ಕೇಂದ್ರಸ್ಥಾನವನ್ನು ಬಿಡುವಂತಿಲ್ಲ.

ಶ್ರೀ ವೃಷಭರಾಜೇಂದ್ರಮೂರ್ತಿ ಹಾಗೂ ಶ್ರೀ ಲಕ್ಷ್ಮೀನರಸಿಂಹಸ್ವಾಮಿ ಇವರುಗಳು ಅಮಾನತ್ತಿನ ಅವಧಿಯಲ್ಲಿ ಕರ್ನಾಟಕ ನಾಗರೀಕ ಸೇವಾನಿಯಮಾವಳಿ ನಿಯಮ 98ರನ್ವಯ ಜೀವನಾಂಶ ಭತ್ಯೆ ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ವಿಶ್ವೇಶ್ವರಯ್ಯ**

ಪಿ.ಆರ್. 1545 ಪೀಠಾಧಿಕಾರಿ, ಆಹಾರ-1 ಶಾಖೆ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

## ಜಲಸಂಪನ್ಮೂಲ ಸಚಿವಾಲಯ

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 09 ಸೇಇವಿ 2006, ಬೆಂಗಳೂರು, ದಿನಾಂಕ:19ನೇ ಅಕ್ಟೋಬರ್ 2006**

**ವಿಷಯ:** ಶ್ರೀ ರಾಮನಾಯಕ್, ಕಾರ್ಯಪಾಲಕ ಅಭಿಯಂತರರು (ನಿವೃತ್ತ) ಮತ್ತು ಶ್ರೀ ರಾಮರಾವ್, ಕಾರ್ಯಪಾಲಕ ಅಭಿಯಂತರರು (ನಿವೃತ್ತ) ಇವರ ವಿರುದ್ಧ ಇಲಾಖಾ ವಿಚಾರಣೆ ಕೈಗೊಳ್ಳುವ ಬಗ್ಗೆ

ಶ್ರೀ ರಾಮನಾಯಕ್, ಕಾರ್ಯಪಾಲಕ ಅಭಿಯಂತರರು (ನಿವೃತ್ತ) ಮತ್ತು ಶ್ರೀ ರಾಮರಾವ್, ಕಾರ್ಯಪಾಲಕ ಅಭಿಯಂತರರು (ನಿವೃತ್ತ) ಇವರುಗಳು ಸಣ್ಣ ನೀರಾವರಿ ವಿಭಾಗ, ಬಳ್ಳಾರಿ ಇಲ್ಲಿ ಕಾರ್ಯಪಾಲಕ ಅಭಿಯಂತರರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ತಂಬ್ರಹಳ್ಳಿ ಏತ ನೀರಾವರಿ ಯೋಜನೆಯ ವೈಫಲ್ಯಕ್ಕೆ ಕಾರಣರಾಗಿರುವುದು ಸರ್ಕಾರದ ಗಮನಕ್ಕೆ ಬಂದಿರುವುದರಿಂದ ಮೇಲ್ಕಂಡ ದುರ್ನಡತೆಗಳಿಗಾಗಿ ಶ್ರೀ ರಾಮನಾಯಕ್, ಕಾರ್ಯಪಾಲಕ ಅಭಿಯಂತರರು (ನಿವೃತ್ತ) ಮತ್ತು ಶ್ರೀ ರಾಮರಾವ್, ಕಾರ್ಯಪಾಲಕ ಅಭಿಯಂತರರು (ನಿವೃತ್ತ) ಇವರುಗಳ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಬೇಕಾಗಿ ಸರ್ಕಾರವು ಭಾವಿಸಿದೆ.

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 214ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ರಾಮನಾಯಕ್, ಕಾರ್ಯಪಾಲಕ ಅಭಿಯಂತರರು (ನಿವೃತ್ತ) ಮತ್ತು ಶ್ರೀ ರಾಮರಾವ್, ಕಾರ್ಯಪಾಲಕ ಅಭಿಯಂತರರು(ನಿವೃತ್ತ) ಇವರುಗಳ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ಇಲಾಖಾ ವಿಚಾರಣೆ ನಡೆಸಬೇಕೆಂದು ಹಾಗೂ ಈ ವಿಚಾರಣೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11, 11ಎ ರಲ್ಲಿ ನಿಗದಿಪಡಿಸಿರುವ ಕಾರ್ಯವಿಧಾನವನ್ನು ಅನುಸರಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1548

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಜಯಸಿಂಹ, ಪಿಸಿ-4037, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೋಲೀಸ್ ಕಮೀಷನರ್, ದಕ್ಷಿಣ ವಿಭಾಗ, ಬೆಂಗಳೂರು ಇವರ ಆದೇಶ ಸಂಖ್ಯೆ: ಇವಿ/ಸಿ6/61/96/122/ಡಿಇ/ಆರ್ 6/2/93, ದಿನಾಂಕ: 29.1.1997/22.2.1997.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೋಲೀಸ್ ಕಮೀಷನರ್ ಆಡಳಿತ ಮತ್ತು ಸಂಚಾರ ಬೆಂಗಳೂರು ನಗರ ಇವರ ಆದೇಶ ಸಂಖ್ಯೆ:34/ಅಪೀಲು/97-96, ದಿನಾಂಕ:1.6.1998.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:21.5.2003.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು /2/22/2003-04, ದಿನಾಂಕ:14.11.2003.
5. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:PSC/84/ CNS/ 2006, ದಿನಾಂಕ:7.9.2006.

**ಪ್ರಸ್ತಾವನೆ:**

ಶ್ರೀ ಬಿ.ಎಸ್. ಜಯಸಿಂಹ, ಪಿಸಿ-4037, (4614) ಬೆಂಗಳೂರು ನಗರ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"1. ದಿನಾಂಕ :25.5.93 ರಿಂದ 21.8.93 ರವರೆಗೆ ಕರ್ತವ್ಯಕ್ಕೆ ಅನಧೀಕೃತವಾಗಿ ಗೈರುಹಾಜರಾಗಿದ್ದು, ಮೇಲಾಧಿಕಾರಿಗಳಿಗೆ ಯಾವುದೇ ಮುನ್ಸೂಚನೆಯನ್ನು ನೀಡದೇ ಕರ್ತವ್ಯಕ್ಕೆ ಗೈರುಹಾಜರಾಗಿರುವುದು ನಿಮ್ಮ ಕರ್ತವ್ಯ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನವನ್ನು ಎತ್ತಿ ತೋರಿಸುತ್ತದೆ".

"2. ದಿನಾಂಕ:25.8.93 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿದ್ದು ಇದುವರೆವಿಗೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಮೇಲಾಧಿಕಾರಿಗಳಿಗೆ ಯಾವುದೇ ಮುನ್ಸೂಚನೆಯನ್ನು ನೀಡದೇ ಪುನಃ ಗೈರುಹಾಜರಾಗಿದ್ದು ಪದೇ ಪದೇ ಗೈರುಹಾಜರಾಗುವ ಹವ್ಯಾಸಿ ಅಸಾಮಿ ಎನಿಸಿಕೊಂಡಿದ್ದು ನಿಮ್ಮ ಕರ್ತವ್ಯದಲ್ಲಿ ಮತ್ತು ಬೇಜಾವಾಬ್ದಾರಿತನ ತೋರುವುದು".

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೋಲೀಸ್ ಕಮೀಷನರ್, ದಕ್ಷಿಣ ವಿಭಾಗ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ:29.1.1997/22-02-1997 ರ ಆದೇಶದಲ್ಲಿ ಅರ್ಜಿದಾರರನ್ನು ಕೆಲಸದಿಂದ ವಜಾ ಮಾಡಿ ಕರ್ತವ್ಯಕ್ಕೆ ಗೈರುಹಾಜರಾದ ದಿನಗಳನ್ನು ಸಂಬಳ ರಹಿತ ರಜೆ ಎಂದು ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೋಲೀಸ್ ಕಮೀಷನರ್, ಆಡಳಿತ ಮತ್ತು ಸಂಚಾರ, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲದಿದ್ದರೂ ಅರ್ಜಿದಾರರ ಮೇಲ್ಮನವಿಯನ್ನು ಮಾನವೀಯತೆಯ ದೃಷ್ಟಿಯಿಂದ ಪರಿಗಣಿಸಿ, ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಮಾರ್ಪಡಿಸಿ ಅರ್ಜಿದಾರರನ್ನು ಕರ್ತವ್ಯಕ್ಕೆ ಪುನರ್ ನೇಮಿಸಿ, ಇವರ ವೇತನವನ್ನು ಪಿಸಿ ಹುದ್ದೆಯ ವೇತನ ಶ್ರೇಣಿಯ ಕನಿಷ್ಟ ಮಟ್ಟಕ್ಕೆ ಇಳಿಸಿ, ಅಲ್ಲಿಂದ ಹೊಸದಾಗಿ ವಾರ್ಷಿಕ ವೇತನ ಬಡ್ತಿಯನ್ನು ಗಳಿಸಲು ಆದೇಶಿಸಿರುತ್ತಾರೆ. ಅಲ್ಲದೇ ಗೈರುಹಾಜರಿ ಅವಧಿಯನ್ನು ಮತ್ತು ಸೇವೆಯಿಂದ ಹೊರಗುಳಿದ ಅವಧಿಯನ್ನೂ ವೇತನ ರಹಿತ ರಜೆ ಎಂದು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:1.6.1998ರ ಆದೇಶದಲ್ಲಿ ಪರಿಗಣಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಗೈರುಹಾಜರಾಗಿರುವುದು ಸಾಬೀತಾಗಿದೆ. ಆದ ಕಾರಣ, ಶಿಸ್ತು ಪ್ರಾಧಿಕಾರಿ ವಿಧಿಸಿರುವ 'ವಜಾ ದಂಡನೆ' ಸಮಂಜಸವಾಗಿದ್ದರೂ, ಮಾನವೀಯತೆಯ ದೃಷ್ಟಿಯಿಂದ ಮೇಲ್ಮನವಿ ಪ್ರಾಧಿಕಾರಿ

ಅರ್ಜಿದಾರರನ್ನು ಸೇವೆಗೆ ಪುನರ್ ನೇಮಿಸಿ ಅವರ ವೇತನವನ್ನು ಪಿಸಿ ಹುದ್ದೆಯ ವೇತನ ಶ್ರೇಣಿಯ ಕನಿಷ್ಠ ಮಟ್ಟಕ್ಕೆ ಇಳಿಸಿ, ಅಲ್ಲಿಂದ ಹೊಸದಾಗಿ ವಾರ್ಷಿಕ ವೇತನ ಬಡ್ತಿ ಪಡೆಯಲು ಆದೇಶಿಸಿರುತ್ತಾರೆ.

ಈ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅವಶ್ಯಕತೆ ಇಲ್ಲದಿದ್ದರೂ, ಕೆಸಿಎಸ್‌ಆರ್ ನ ನಿಯಮ 59(II) ರನ್ವಯ ನಿರ್ದಿಷ್ಟ ಅವಧಿ ಇಲ್ಲದೆ, ಅಥವಾ ಖಾಯಂ ಕ್ರಮವಾಗಿ ವೇತನವನ್ನು ಕೆಳಹಂತಕ್ಕಿಳಿಸಲು ಅವಕಾಶವಿಲ್ಲದ ಕಾರಣ, ಮೇಲ್ಮನವಿ ಪ್ರಾಧಿಕಾರಿಯ ದಿನಾಂಕ:1.6.1998ರ ಆದೇಶವನ್ನು ಭಾಗಶಃ ಮಾರ್ಪಡಿಸಿ, ಅರ್ಜಿದಾರರ ವೇತನವನ್ನು ಅವರು ಪಡೆಯುತ್ತಿರುವ ವೇತನ ಶ್ರೇಣಿಯ ಕನಿಷ್ಠ ಮಟ್ಟಕ್ಕೆ ಮೂರು ವರ್ಷದ ಅವಧಿಗೆ ಇಳಿಸಿ, ಈ ಅವಧಿಯಲ್ಲಿ ಯಾವುದೇ ವಾರ್ಷಿಕ ವೇತನ ಬಡ್ತಿ ಗಳಿಸದೇ, ಮೂರು ವರ್ಷಗಳ ದಂಡನಾ ಅವಧಿ ನಂತರ ದಂಡನಾದೇಶದ ಹಿಂದಿನ ದಿನದಂದು ಪಡೆಯುತ್ತಿದ್ದ ವೇತನಕ್ಕೆ, ವೇತನವನ್ನು ನಿಗದಿಪಡಿಸಿ,ಅಲ್ಲಿಂದ ವಾರ್ಷಿಕ ವೇತನ ಬಡ್ತಿ ಗಳಿಸುವಂತೆ ಆದೇಶಿಸಲು ಸರ್ಕಾರ ಉದ್ದೇಶಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ:7.9.2006ರ ತನ್ನ ಪತ್ರದಲ್ಲಿ ಈ ಪ್ರಸ್ತಾವನೆಗೆ ಸಹಮತಿ ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 83 ಪೊಸಿಅ 2003, ಬೆಂಗಳೂರು, ದಿನಾಂಕ: 16ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ದಿನಾಂಕ:1.6.1998ರ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೋಲೀಸ್ ಆಯುಕ್ತರು, ಆಡಳಿತ ಮತ್ತು ಸಂಚಾರ ಬೆಂಗಳೂರು ಇವರ ಆದೇಶವನ್ನು ಭಾಗಶಃ ಮಾರ್ಪಡಿಸಿ, ಶ್ರೀ ಬಿ.ಎಸ್. ಜಯಸಿಂಹ, ಪಿಸಿ-4037 (4614) ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:21.5.2003ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, ಅರ್ಜಿದಾರರ ವೇತನವನ್ನು ಅವರ ಪಡೆಯುತ್ತಿರುವ ವೇತನ ಶ್ರೇಣಿಯ ಕನಿಷ್ಠ ಮಟ್ಟಕ್ಕೆ ಮೂರು ವರ್ಷ ವರ್ಷದ ಅವಧಿಗೆ ಇಳಿಸಿ, ಈ ಅವಧಿಯಲ್ಲಿ ಯಾವುದೇ ವಾರ್ಷಿಕ ವೇತನ ಬಡ್ತಿ ಗಳಿಸದೇ, ಮೂರು ವರ್ಷಗಳ ದಂಡನಾ ಅವಧಿಯ ನಂತರ ಶಿಸ್ತು ಪ್ರಾಧಿಕಾರಿಯ ದಂಡನಾದೇಶದ ಹಿಂದಿನ ದಿನದಂದು ಪಡೆಯುತ್ತಿದ್ದ ವೇತನಕ್ಕೆ ವೇತನವನ್ನು ನಿಗದಿಪಡಿಸಿ, ಅಲ್ಲಿಂದ ವಾರ್ಷಿಕ ವೇತನ ಬಡ್ತಿ ಗಳಿಸುವಂತೆ ಆದೇಶಿಸಿದೆ.

2. ಉಳಿದಂತೆ ಮಿಕ್ಕ ಎಲ್ಲಾ ನಿಬಂಧನೆಗಳೂ ಮೇಲ್ಮನವಿ ಪ್ರಾಧಿಕಾರಿಯ ಆದೇಶದಲ್ಲಿದ್ದಂತೆಯೇ ಮುಂದುವರಿಯುತ್ತವೆ,

3. ಈ ಆದೇಶವು ಶಿಸ್ತು ಪ್ರಾಧಿಕಾರಿಯ ದಂಡನಾದೇಶದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಸಂಖ್ಯೆ:PSC/84/CNS/2006 ದಿನಾಂಕ:7.9.2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1549

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೋಲೀಸ್ ಸೇವೆಗಳು)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಮಾನ್ಯ ಉಪ ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ಗ್ರೂಪ್ 'ಎ' ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :** 1) ಟಿಪ್ಪಣಿ ಸಂಖ್ಯೆ: ಉಮುಮ/ಗೃ/2167/06, ದಿನಾಂಕ: 9.5.2006.

2) ಟಿಪ್ಪಣಿ ಸಂಖ್ಯೆ: ಉಮುಮ/ಗೃ/1984/06, ದಿನಾಂಕ: 24.8.2006.

**ಪ್ರಸ್ತಾವನೆ :**

ಮೇಲೆ ಓದಲಾಗಿರುವ ಟಿಪ್ಪಣಿಗಳಲ್ಲಿ ಮಾನ್ಯ ಉಪಮುಖ್ಯ ಮಂತ್ರಿಯವರು ಶ್ರೀ ಎಸ್.ಎನ್. ಅಶೋಕ್, ಸಹಾಯಕ ಪ್ರಧಾನ ವ್ಯವಸ್ಥಾಪಕರು, ಬೆಮೆಲ್, ಕಪೂರ್ತಲ (ಪಂಜಾಬ್) ಇವರ ಸೇವೆಯು ತಮ್ಮ ಸಚಿವಾಲಯದಲ್ಲಿ ಅವಶ್ಯವಿರುವುದರಿಂದ ಇವರನ್ನು ದಿನಾಂಕ: 24.4.2006 ರಿಂದ ಜಾರಿಗೆ ಬರುವಂತೆ ತಮ್ಮ ವಿಶೇಷ ಕರ್ತವ್ಯಾಧಿಕಾರಿಯನ್ನಾಗಿ ನೇಮಿಸುವ ಬಗ್ಗೆ ಅಗತ್ಯ ಕ್ರಮ ಕೈಗೊಳ್ಳುವಂತೆ ಕೋರಿದ್ದಾರೆ.

ಈ ಬಗ್ಗೆ ಪರಿಶೀಲಿಸಲಾಗಿದ್ದು, ಶ್ರೀ ಎಸ್.ಎನ್. ಅಶೋಕ್ ಇವರನ್ನು ಮಾನ್ಯ ಉಪ ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ವಿಶೇಷ ಕರ್ತವ್ಯಾಧಿಕಾರಿಯನ್ನಾಗಿ ಗುತ್ತಿಗೆ ಆಧಾರದ ಮೇರೆಗೆ ನೇಮಕ ಮಾಡುವ ಸಲುವಾಗಿ ಉಪ ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ಒಂದು ಗ್ರೂಪ್-ಎ ಹುದ್ದೆಯನ್ನು ಸೃಜಿಸುವ ಅಗತ್ಯತೆಯನ್ನು ಮನಗಂಡು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 215 ಸಅಸೇ 2006, ಬೆಂಗಳೂರು, ದಿನಾಂಕ: 28ನೇ ಅಕ್ಟೋಬರ್ 2006**

ಮಾನ್ಯ ಉಪ ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ಶ್ರೀ ಎಸ್.ಎನ್. ಅಶೋಕ್, ಸಹಾಯಕ ಪ್ರಧಾನ ವ್ಯವಸ್ಥಾಪಕರು, ಬೆಮೆಲ್, ಕರ್ಪೂತಲ (ಪಂಜಾಬ್) ಇವರನ್ನು ವಿಶೇಷ ಕರ್ತವ್ಯಾಧಿಕಾರಿಯನ್ನಾಗಿ ಗುತ್ತಿಗೆ ಆಧಾರದ ಮೇರೆಗೆ ನೇಮಿಸುವ ಸಲುವಾಗಿ ಮಾನ್ಯ ಉಪ ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ಒಂದು ಗ್ರೂಪ್ ಎ ಹುದ್ದೆಯನ್ನು (ವೇತನ ಶ್ರೇಣಿ ರಹಿತ) ದಿನಾಂಕ: 1.6.006 ರಿಂದ ಜಾರಿಗೆ ಬರುವಂತೆ ಹಾಗೂ ಮಾನ್ಯ ಉಪ ಮುಖ್ಯಮಂತ್ರಿಯವರ ಪದಾವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸೃಜಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1088/ವೆಚ್ಚ-5/2006, ದಿನಾಂಕ: 26.6.2006ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1562

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಟಿ.ಡಿ. ನರಸಿಂಹಯ್ಯ, ಕಾರ್ಯನಿರ್ವಹಣಾಧಿಕಾರಿ, ಶ್ರೀ ಚಾಮುಂಡೇಶ್ವರಿ ದೇವಸ್ಥಾನ, ಚಾಮುಂಡಿ ಬೆಟ್ಟ, ಮೈಸೂರು, ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಕುರಿತು.

**ಓದಲಾಗಿದೆ :** ಧಾರ್ಮಿಕ ಧತ್ತಿ ಆಯುಕ್ತರು, ಬೆಂಗಳೂರು, ಇವರ ದಿನಾಂಕ:12.10.2006ರ ಪತ್ರ ಸಂಖ್ಯೆ:ಸಿಬ್ಬಂದಿ.3.ಸಿಆರ್.16/06-07.

**ಪ್ರಸ್ತಾವನೆ :**

ಶ್ರೀ ಟಿ.ಡಿ. ನರಸಿಂಹಯ್ಯ, ಕಾರ್ಯನಿರ್ವಹಣಾಧಿಕಾರಿ, ಶ್ರೀ ಚಾಮುಂಡೇಶ್ವರಿ ದೇವಸ್ಥಾನ, ಚಾಮುಂಡಿ ಬೆಟ್ಟ, ಮೈಸೂರು, ಇವರು, ಶ್ರೀಮತಿ ಶಕುಂತಲ ಕೋಂ ಚೆಲುವರಾಜು ಎಂಬುವವರನ್ನು ಸ್ವೀಪರ್ ಕೆಲಸಕ್ಕೆ ತಾತ್ಕಾಲಿಕವಾಗಿ ನೇಮಕ ಮಾಡಿಕೊಂಡಿದ್ದು, ಸದರಿಯವರಿಗೆ ಹುದ್ದೆಯನ್ನು ಖಾಯಂಗೊಳಿಸಿಕೊಡುವುದಾಗಿ ರೂ.10,000/- ಲಂಚದ ಹಣಕ್ಕೆ ಒತ್ತಾಯ ಮಾಡಿ ಲಂಚದ ಹಣವನ್ನು ಪಡೆಯುತ್ತಿದ್ದಾಗ, ಗೌರವಾನ್ವಿತ ಲೋಕಾಯುಕ್ತರ ಕಛೇರಿಯ ಸಿಬ್ಬಂದಿಯವರು ಲಂಚ ನಿರೋಧ ಖಾಯಿದೆ 1988 ರನ್ವಯ ದಸ್ತಗಿರಿ ಮಾಡಿರುತ್ತಾರೆ. ಶ್ರೀ ನರಸಿಂಹಯ್ಯರವರನ್ನು ದಿನಾಂಕ:6.10.2006 ರಂದು ರಾತ್ರಿ ಗೌರವಾನ್ವಿತ ನ್ಯಾಯಾಲಯಕ್ಕೆ ಹಾಜರುಪಡಿಸಿ, ತದನಂತರ ಅವರನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಿರುತ್ತಾರೆಂದು ಮೇಲೆ ಓದಲಾದ ದಿನಾಂಕ: 12.10.2006ರ ಪತ್ರದಲ್ಲಿ ಧಾರ್ಮಿಕ ಧತ್ತಿ ಆಯುಕ್ತರು ವರದಿ ಮಾಡಿ, ಸದರಿ ಪ್ರಸ್ತಾವನೆಯೊಂದಿಗೆ ಸಂಬಂಧಿಸಿದ ಎಫ್.ಐ.ಆರ್. ಪ್ರತಿಯನ್ನು ಸಹ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಶ್ರೀ ಟಿ.ಡಿ. ನರಸಿಂಹಯ್ಯ, ಕಾರ್ಯನಿರ್ವಹಣಾಧಿಕಾರಿ, ಶ್ರೀ ಚಾಮುಂಡೇವರಿ ದೇವಸ್ಥಾನ, ಚಾಮುಂಡಿ ಬೆಟ್ಟ, ಮೈಸೂರು, ಇವರು ಲಂಚದ ಹಣ ಸ್ವೀಕರಿಸಿರುವ ಬಗ್ಗೆ ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಇವರ ಕಾರ್ಯವೈಖರಿಯನ್ನು ಸರ್ಕಾರವು ಗಂಭೀರವಾಗಿ ಪರಿಗಣಿಸಿ, ಇವರ ವಿರುದ್ಧ ಇಲಾಖಾ ವಿಚಾರಣೆ ಹೂಡುವುದನ್ನು ಬಾಕಿಯಿಟ್ಟು, ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಲು ನಿರ್ಧರಿಸಿರುವ ಮೇರೆಗೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 100 ಮುಸೇವಿ 2006, ಬೆಂಗಳೂರು, ದಿನಾಂಕ: 9ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಸರ್ಕಾರ ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ಟಿ.ಡಿ. ನರಸಿಂಹಯ್ಯ, ಕಾರ್ಯನಿರ್ವಹಣಾಧಿಕಾರಿ, ಶ್ರೀ ಚಾಮುಂಡೇಶ್ವರಿ ದೇವಸ್ಥಾನ, ಚಾಮುಂಡಿ ಬೆಟ್ಟ, ಮೈಸೂರು, ಇವರ ವಿರುದ್ಧ ಇಲಾಖಾ ವಿಚಾರಣೆ ಹೂಡುವುದನ್ನು ಬಾಕಿಯಿಟ್ಟು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 10 (i) (a) ರನ್ವಯ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರನ್ನು ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98 ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ ಹಾಗೂ ಈ ಅವಧಿಯಲ್ಲಿ ಸದರಿ ಅಧಿಕಾರಿಯವರು ಸಕ್ಷಮ ಪ್ರಾಧಿಕಾರಿಯವರ ಪೂರ್ವಾನುಮತಿ ಪಡೆಯದೆ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಜಯಚಂದ್ರ**

ಪಿ.ಆರ್. 1563

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಕಂದಾಯ ಇಲಾಖೆ (ಮುಜರಾಯಿ)

**ವಿಷಯ :** ತಮಿಳು ಸಂಘ ಹುಬ್ಬಳ್ಳಿ, ಧಾರವಾಡ ಜಿಲ್ಲೆ ಈ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಕುರಿತು.

**ಓದಲಾಗಿದೆ :**
1. ಜಿಲ್ಲಾ ನೋಂದಣಾಧಿಕಾರಿಗಳು, ಧಾರವಾಡ ಜಿಲ್ಲೆ ಇವರ ಪತ್ರ ಸಂಖ್ಯೆ: ಸಂಘ 47/2004-05, ದಿನಾಂಕ:20/04/2006.
2. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ:ಕಂಇ 63 ಮುನೊಸೊ 2004, ದಿನಾಂಕ:29/05/2006.
3. ಕಾರ್ಯದರ್ಶಿಗಳು, ಹುಬ್ಬಳ್ಳಿ ತಮಿಳು ಸಂಘ, ಇವರ ಲಿಖಿತ ಹೇಳಿಕೆ ಸಂಖ್ಯೆ:ಹೆಚ್‌ಟಿಎಸ್/ಕೆಟಿಎಂಹೆಚ್ಎಸ್/ಎಸ್‌ಇಸಿ/87/2006-07, ದಿನಾಂಕ: 16/06/2006.
4. ಜಿಲ್ಲಾ ನೋಂದಣಾಧಿಕಾರಿ, ಧಾರವಾಡ ಇವರ ವರದಿ ಸಂಖ್ಯೆ:ಸಂಘ-47/04-05, ದಿನಾಂಕ:12/07/2006.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ಜಿಲ್ಲಾ ನೋಂದಣಾಧಿಕಾರಿಗಳು, ಹುಬ್ಬಳ್ಳಿ ತಮಿಳು ಸಂಘ ಕುರಿತು ವರದಿ ನೀಡುತ್ತಾ, ಸಂಸ್ಥೆಯ ಆಡಳಿತ ಮಂಡಳಿಯಲ್ಲಿ 2 ಗುಂಪುಗಳಾಗಿದ್ದು, ಸಂಸ್ಥೆಗೆ ಅನೇಕ ವರ್ಷಗಳಿಂದ ಚುನಾವಣೆ ನಡೆಸದೆ ಕಾನೂನು ಬಾಹಿರವಾಗಿ ಆಡಳಿತ ಮಂಡಳಿ ಆಡಳಿತ ನಡೆಸುತ್ತಿದ್ದು, ಈ ಕುರಿತು ನ್ಯಾಯಾಲಯದಲ್ಲಿದ್ದ ದಾವೇ 535/03 ನ್ನು ನ್ಯಾಯಾಲಯವು ವಜಾಮಾಡಿರುವುದರಿಂದ ತಮಿಳು ಸಂಘ ಸಂಸ್ಥೆ ಮತ್ತು ತಮಿಳು ಶಿಕ್ಷಣ ಪಡೆಯುತ್ತಿರುವ ಮಕ್ಕಳ ಹಿತದೃಷ್ಟಿಯಿಂದ ಸಂಘಕ್ಕೆ ಆಡಳಿತಾಧಿಕಾರಿ ನೇಮಕ ಮಾಡಲು ಶಿಫಾರಸ್ಸು ಮಾಡಿದ್ದಾರೆ. ಓದಲಾದ (2)ರಲ್ಲಿ ಜಿಲ್ಲಾ ನೋಂದಣಾಧಿಕಾರಿಗಳ ವರದಿಯಮನ್ನು ಪರಿಶೀಲಿಸಿ ಸಂಘಕ್ಕೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಯಿತು. ಓದಲಾದ (3)ರ ಪ್ರಕಾರ ಸಂಘದ ಕಾರ್ಯದರ್ಶಿಗಳು ಲಿಖಿತ ಹೇಳಿಕೆ ನೀಡುತ್ತಾ, ಸಂಘವು ಸಂಘಗಳ ನೋಂದಣಿ ಕಾಯ್ದೆ ಕಲಂಗಳನ್ನು ಉಲ್ಲಂಘಿಸಿರುವುದಿಲ್ಲ. ಜಿಲ್ಲಾ ನೋಂದಣಾಧಿಕಾರಿಗಳ ವರದಿ ಯಾವುದೇ ಆಧಾರವಿಲ್ಲವೆಂದು ಹೇಳಿಕೆ ಸಲ್ಲಿಸಿ ಆಡಳಿತಾಧಿಕಾರಿ ನೇಮಕ ಪ್ರಕ್ರಿಯೆ ಕೈಬಿಡಲು ಕೋರಿದ್ದಾರೆ. ಸಂಘದ ಲಿಖಿತ ಹೇಳಿಕೆಯನ್ನು ಕುರಿತು ಜಿಲ್ಲಾ ನೋಂದಣಾಧಿಕಾರಿಗಳಿಂದ ಓದಲಾದ (4)ರ ಪ್ರಕಾರ ಮತ್ತೆ ಅಭಿಪ್ರಾಯ ಪಡೆಯಲಾಗಿ ಸದರಿ ಸಂಘವು 2000-01 ರಿಂದ ಸಂಘಗಳ ನೋಂದಣಿ ಕಾಯ್ದೆ ಕಲಂ 11,12 & 13ರ ಪ್ರಕಾರ ದಾಖಲೆಗಳನ್ನು ಜಿಲ್ಲಾ ನೋಂದಣಾಧಿಕಾರಿಗಳಿಗೆ ಸಲ್ಲಿಸಿರುವುದಿಲ್ಲ. ಸಂಘದ ಪದಾಧಿಕಾರಿಗಳು ಸಂಘವನ್ನು ದುರುಪಯೋಗಪಡಿಸಿಕೊಂಡಿರುವುದು ಕಂಡುಬರುತ್ತದೆಯಾದ್ದರಿಂದ ತಮಿಳು ಶಿಕ್ಷಣ ಪಡೆಯುತ್ತಿರುವ ಮಕ್ಕಳ ಹಿತದೃಷ್ಟಿಯಿಂದ ಹಾಗೂ ಸಂಘದ ಹಿತದೃಷ್ಟಿಯಿಂದ ಆಡಳಿತಾಧಿಕಾರಿಯನ್ನು ನೇಮಕ ಮಾಡಲು ತಮ್ಮ ಅಭಿಪ್ರಾಯವನ್ನು ಸಲ್ಲಿಸಿರುತ್ತಾರೆ.

ಜಿಲ್ಲಾ ನೋಂದಣಾಧಿಕಾರಿಗಳ ವರದಿ ಮತ್ತು ಅಭಿಪ್ರಾಯ ಹಾಗೂ ಸಂಘದ ಲಿಖಿತ ಹೇಳಿಕೆಯನ್ನು ಸರ್ಕಾರವು ಪರಿಶೀಲಿಸಿ ಸಂಘದ ಹಿತದೃಷ್ಟಿಯಿಂದ ಆಡಳಿತಾಧಿಕಾರಿ ನೇಮಕ ಮಾಡಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 63 ಮುನೊಸೋ 2004, ಬೆಂಗಳೂರು, ದಿನಾಂಕ: 21ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಾರ್ವಜನಿಕ ಹಿತದೃಷ್ಟಿಯಿಂದ ಹುಬ್ಬಳ್ಳಿ ತಮಿಳು ಸಂಘಂ, ನಂ.140, ಗೂಡ್‌ಶೆಡ್ ರಸ್ತೆ, ಹುಬ್ಬಳ್ಳಿ, ಧಾರವಾಡ ಜಿಲ್ಲೆ ಈ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27ಎ ಪ್ರಕಾರ ಸರ್ಕಾರಕ್ಕೆ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ ತಹಶೀಲ್ದಾರ್, ಹುಬ್ಬಳ್ಳಿ ನಗರ ಇವರನ್ನು ಆಡಳಿತಾಧಿಕಾರಿಯನ್ನಾಗಿ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದೊ ಮೊದಲೊ ಅಲ್ಲಿಯವರೆಗೆ ನೇಮಿಸಿದೆ.

ಆಡಳಿತಾಧಿಕಾರಿಗಳು ಈ ಅವಧಿಯಲ್ಲಿ ಸಂಘದ ಅವ್ಯವಹಾರಗಳನ್ನು ಸರಿಪಡಿಸಿ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1564

**ಶಿವಲಿಂಗ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

ಇಂಧನ ಸಚಿವಾಲಯ

**ವಿಷಯ :** ಮೆ:: ಸಾಯಿ ಕೃಷ್ಣ ಹೈಡ್ರೊ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಕಕ್ಕೇರಿ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶವನ್ನು ಅಮಾನತಿನಲ್ಲಿ ಇಟ್ಟಿರುವುದನ್ನು ಹಿಂಪಡೆಯುವ ಬಗ್ಗೆ.

**ಓದಲಾಗಿದೆ :** 1 ಸರ್ಕಾರಿ ಆದೇಶ ಸಂಖ್ಯೆ: ಇಎನ್ 371 ಎನ್‌ಸಿಇ 2006 ದಿನಾಂಕ: 15.9.2006.

2 ಮೆ:: ಸಾಯಿ ಕೃಷ್ಣಾ ಹೈಡ್ರೊ ಪವರ್ ಪ್ರೈ. ಲಿ., ಕಂಪನಿಯ ನಿರ್ದೇಶಕರ ಪತ್ರ ದಿನಾಂಕ: 20.9.2006.

3 ಮೆ:: ಕೃಷ್ಣಾ ಹೈಡಲ್ ಪವರ್ ಪ್ರೈ. ಲಿ., ಕಂಪನಿಯ ನಿರ್ದೇಶಕರ ಪತ್ರ ದಿನಾಂಕ: 20.9.2006.

**ಪ್ರಸ್ತಾವನೆ:**

ಓದಲಾದ (1) ರ ಆದೇಶದಲ್ಲಿ ಮೆ:: ಸಾಯಿ ಕೃಷ್ಣ ಹೈಡ್ರೊ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಶೋರಾಪುರ ತಾಲ್ಲೂಕಿನ ಕಕ್ಕೇರಿ ಗ್ರಾಮದ ಹತ್ತಿರದಲ್ಲಿ ಕಕ್ಕೇರಿ ಪಿಕ್ ಅಪ್ ಕಾಲುವೆಗೆ ಅಡ್ಡಲಾಗಿ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ನೀಡಿರುವ ಹಂಚಿಕೆ ಆದೇಶವನ್ನು ಅಮಾನತಿನಲ್ಲಿ ಇಡಲಾಗಿತ್ತು.

ಪ್ರಸ್ತುತ ಡಾ:: ಶ್ರೀಕಾಂತ್ ಸಿನ್ನೂರು ಮತ್ತು ಬೀರಾದಾರ್ ಕುಟುಂಬದೊಳಗೆ ವ್ಯಾಜ್ಯ ಇರುವುದರಿಂದ ಹಾಗೂ ಕಂಪನಿಯ ಆಡಳಿತ ಮಂಡಳಿಯಲ್ಲಿ ಮೇಜರ್ ಷೇರ್ ಹೋಲ್ಡರ್ಸ್‌ರಾಗಿರುವ ಬೀರಾದಾರ್ ಕುಟುಂಬದವರು ಸದರಿ ವ್ಯಾಜ್ಯದಿಂದಾಗಿ ಸರ್ಕಾರದ ಯೋಜನೆಯು ನೆನೆಗುದಿಗೆ ಬೀಳಬಾರದು ಎಂದು ನಿಶ್ಚಯಿಸಿ ಸರ್ಕಾರದಿಂದ ಹಂಚಿಕೆ ಮಾಡಿದ ಯೋಜನೆಯನ್ನು ಮೆ:: ಸಾಯಿ ಕೃಷ್ಣಾ ಹೈಡ್ರೊ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರಿಗೆ ವರ್ಗಾಯಿಸಿಕೊಂಡಿರುತ್ತಾರೆ.

ಸರ್ಕಾರದಿಂದ ಯೋಜನೆಯನ್ನು ಅಭಿವೃದ್ಧಿದಾರರಿಗೆ ಹಂಚಿಕೆ ಮಾಡಲಾಗುವುದಷ್ಟೇ ವಿನಹ: ಕಂಪನಿಯ ಆಸ್ತಿ ಹಾಗೂ ಯಂತ್ರೋಪಕರಣಗಳಿಗೆ ಮತ್ತು ಕಂಪನಿಯ ಒಳಜಗಳಗಳಿಗೆ ಸರ್ಕಾರವು ಯಾವುದೇ ಕಾರಣಕ್ಕೂ ಹೊಣೆಗಾರರಾಗಿರುವುದಿಲ್ಲ. ಡಾ:: ಶ್ರೀಕಾಂತ್ ಸಿನ್ನೂರು ರವರು ಮಾಡಿರುವ ಆಕ್ಷೇಪಣೆ ಮೇಲೆ ಸದರಿ ವರ್ಗಾವಣೆ ಆದೇಶವನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕಷವಾಗಿ ಪರಿಶೀಲಿಸುವ ಹಿನ್ನೆಲೆಯಲ್ಲಿ ಹಂಚಿಕೆ ಆದೇಶವನ್ನು ಓದಲಾದ ಆದೇಶದಲ್ಲಿ ತಡೆಹಿಡಿಯಲಾಗಿತ್ತು.

ಓದಲಾದ (2) ಮತ್ತು (3) ರ ಪತ್ರಗಳಲ್ಲಿ ಅಭಿವೃದ್ಧಿದಾರರು ನೀಡಿದ ಮಾಹಿತಿ ಮತ್ತು ದಾಖಲಾತಿಗಳನ್ವಯ ಸದರಿ ಯೋಜನೆಯಿಂದ ಸರ್ಕಾರದ ವಿದ್ಯುತ್ ಜಾಲಕ್ಕೆ ಅತ್ಯಾವಶ್ಯಕವಾಗಿ ವಿದ್ಯುತ್ ಪೂರೈಕೆ ಮಾಡುವ ನಿಟ್ಟಿನಲ್ಲಿ ಯೋಜನೆಯು ಕಾರ್ಯಗತಗೊಳ್ಳಲು ಅನುವಾಗುವಂತೆ ಸರ್ಕಾರವು ಅಮಾನತಿನಲ್ಲಿ ಇಟ್ಟಿರುವ ಆದೇಶವನ್ನು ಹಿಂದಕ್ಕೆ ಪಡೆದು ಮೆ:: ಸಾಯಿ ಕೃಷ್ಣ ಹೈಡ್ರೊ ಪವರ್ ಪ್ರೈವೇಟ್ ಲಿಮಿಟೆಡ್ ಎಂಬ ಕಂಪನಿಯ ಹೆಸರಿನಲ್ಲಿಯೇ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಕಕ್ಕೇರಿ ಕಿರು ಜಲ ವಿದ್ಯುತ್ ಯೋಜನೆಯನ್ನು ಮುಂದುವರೆಸಲು ನಿಶ್ಚಯಿಸಲಾಗಿದೆ.

ಮೇಲಿನ ಅಂಶಗಳನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 371 ಎನ್‌ಸಿಇ 2006, ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್ 2006.**

ಆದೇಶ ಸಂಖ್ಯೆ: ಇಎನ್ 371 ಎನ್‌ಸಿಇ 2006 ದಿನಾಂಕ: 15.9.2006 ರ ಅಮಾನತ್ತು ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರದಿಂದ ಹಿಂದಕ್ಕೆ ಪಡೆಯಲಾಗಿದೆ ಹಾಗೂ ಮೆ:: ಸಾಯಿ ಕೃಷ್ಣ ಹೈಡ್ರೊ ಪವರ್ ಪ್ರೈವೇಟ್ ಲಿಮಿಟೆಡ್ ಎಂಬ ಕಂಪನಿಯ ಹೆಸರಿನಲ್ಲಿಯೇ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಕಕ್ಕೇರಿ ಕಿರು ಜಲ ವಿದ್ಯುತ್ ಯೋಜನೆಯನ್ನು ಮುಂದುವರೆಸಲು ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್.ಬಿ.ಕೃಷ್ಣಪ್ಪನವರ್**

ಪಿ.ಆರ್. 1451

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ENERGY SECRETARIAT**

**Sub :** Transfer of 4.2 MW Wind Power Capacity in favour of M/s Sanjay D.Ghodawat-reg.

**Read :** 1. Government Order No: DE 26 NCE 1999 dated: 13.5.1999.

2. Government Order No : EN 32 NCE 2004, dated : 3.3.2004.
3. Letter No : KRED / 08 / SDG-VRRB / 2006 / 2112 dated: 27.9.2006 received from the Managing Director, Karnataka Renewable Energy Development Limited, Bangalore.

**PREAMBLE**:

In the Government Order read at (2) above, sanction has been accorded for implementation of 25.00 MW capacity Wind Power Project at Davangere District in favour M/s Vestas RRB India Limited.

Now, the Managing Director, Karnataka Renewable Energy Development Limited, Bangalore, in his letter dated : 27.9.2006 read at (3) above, has recommended to the Government for transfer of 4.2 MW Wind Power capacity in favour of M/s Sanjay D.Ghodawat at Daginakatte, Hosakere and Harosagara villages of Channagiri Taluk, Davangere District from M/s Vestas RRB India Limited.

The proposal has been examined at the Government level and hence the order :-

**Government Order No: EN 390 NCE 2006, Bangalore, Dated: 30th September 2006.**

Government accords approval for transfer of 4.2 MW Wind Power capacity in favour of M/s Sanjay D.Ghodawat at Daginakatte, Hosakere and Harosagara villages of Channagiri Taluk, Davangere District from M/s Vestas RRB India Limited.

The terms and conditions of the Government Order read at (1) above, shall **IPSO FACTO** applicable.

By Order and in the name of Governor of Karnataka,
**SURESH.B.KRISHNAPPANAVAR,**
Under Secretary to Government,
Energy Department.

P.R. 1452

**Sub :** Transfer of 1.2 MW Wind Power Capacity in favour of M/s Pragati Aroma Oil Distillers Pvt. Limited-reg.

**Read :** 1. Government Order No: DE 26 NCE 1999 dated: 13.5.1999.
2. Government Order No : EN 32 NCE 2004, dated : 3.3.2004.
3. Letter No : KRED / 08 / PAODPL / 2006 / 2113 dated: 27.9.2006 received from the Managing Director, Karnataka Renewable Energy Development Limited, Bangalore.

**PREAMBLE**:

In the Government Order read at (2) above, sanction has been accorded for implementation of 25.00 MW capacity Wind Power Project at Davangere District in favour M/s Vestas RRB India Limited.

Now, the Managing Director, Karnataka Renewable Energy Development Limited, Bangalore, in his letter dated : 27.9.2006 read at (3) above, has recommended to the Government for transfer of 1.2 MW Wind Power capacity in favour of M/s Pragati Aroma Oil Distillers Pvt. Limited at Kotehal village of Channagiri Taluk, Davangere District from M/s Vestas RRB India Limited.

The proposal has been examined at the Government level and hence the order :-

**Government Order No: EN 391 NCE 2006, Bangalore, Dated: 30th September 2006.**

Government accords approval for transfer of 1.2 MW Wind Power capacity in favour of M/s Pragati Aroma Oil Distillers Pvt. Limited at Kotehal village of Channagiri Taluk, Davangere District from M/s Vestas RRB India Limited.

The terms and conditions of the Government Order read at (1) above, shall **IPSO FACTO** applicable.

By Order and in the name of Governor of Karnataka,
**SURESH.B.KRISHNAPPANAVAR**
Under Secretary to Government,
Energy Department.

P.R. 1453

ಇಂಧನ ಸಚಿವಾಲಯ

**ವಿಷಯ :** 3.00 ಮೆಗಾ ವ್ಯಾಟ್ ಸಾಮರ್ಥ್ಯದ ಸುಂಕುಂದಿ (ಸಂಕದಗುಂಡಿ) ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ವಿ.ಐ. ಶೆಟ್ಟಿ ಅಂಡ್ ಕಂಪನಿಯ ಹೆಸರಿನಿಂದ ಮೆ:: ಸಿದ್ಧಿ ಶ್ರೀ ಶಿವೆ ಪವರ್ಸ್ ಲಿಮಿಟೆಡ್ ಎಂಬ ಕಂಪನಿಯ ಹೆಸರಿನಲ್ಲಿ ಅನುಷ್ಠಾನ ಮಾಡಲು ಅನುಮತಿಸುವ ಬಗ್ಗೆ.

**ಓದಲಾಗಿದೆ :** 1 ಸರ್ಕಾರಿ ಆದೇಶ ಸಂಖ್ಯೆ : ಇಂಇ 82 ಎನ್‌ಸಿಇ 2002 ದಿನಾಂಕ : 15.7.2002.
2 ಕ್ರೆಡಲ್ ನ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಸಂಕುಂದಿ/2006/2002 ದಿನಾಂಕ: 7.9.2006.

**ಪ್ರಸ್ತಾವನೆ:–**

ಓದಲಾದ (1)ರ ಆದೇಶದಲ್ಲಿ ಮೆ:: ವಿ.ಐ. ಶೆಟ್ಟಿ ಅಂಡ್ ಕಂಪನಿಗೆ ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಬೈಂದೂರು ಪಟ್ಟಣದ ಶೀರೂರು ಗ್ರಾಮದ ಬಳಿ ಕಾಳಿಗುಂಡಿಯಿಂದ 50 ಮೀಟರ್ ಕೆಳ ತೊರೆಯಲ್ಲಿ ಸಂಕುಂದಿ (ಸಂಕದಗುಂಡಿ) ತೊರೆಯಲ್ಲಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಕಂಪನಿಯ ಅಭಿವೃದ್ಧಿದಾರರ ಆರ್ಥಿಕ ಸಮರ್ಥನೆಗೋಸ್ಕರ ಮೆ:: ವಿ.ಐ. ಶೆಟ್ಟಿ ಅಂಡ್ ಕಂಪನಿಯ ಹೆಸರಿನಲ್ಲಿ ಹಂಚಿಕೆ ಮಾಡಲಾಗಿರುವ ಸಂಕದಗುಂಡಿ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ಸಿದ್ಧಿ ಶ್ರೀ ಶಿವೆ ಪವರ್ಸ್ ಲಿಮಿಟೆಡ್ ಕಂಪನಿಯ ಹೆಸರಿನಲ್ಲಿ ಅನುಷ್ಠಾನ ಮಾಡಲು ಅನುಮತಿಸಬೇಕೆಂದು ಕೋರಿರುವ ಹಿನ್ನೆಲೆಯಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಶಿಫಾರಸ್ಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 383 ಎನ್‌ಸಿಇ 2006, ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್ 2006.**

ಸರ್ಕಾರವು ಮೆ:: ವಿ.ಐ. ಶೆಟ್ಟಿ ಅಂಡ್ ಕಂಪನಿಗೆ ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಬೈಂದೂರು ಪಟ್ಟಣದ ಶೀರೂರು ಗ್ರಾಮದ ಬಳಿ ಕಾಳಿಗುಂಡಿಯಿಂದ 50 ಮೀಟರ್ ಕೆಳ ತೊರೆಯಲ್ಲಿ ಸಂಕುಂದಿ (ಸಂಕದಗುಂಡಿ) ತೊರೆಯಲ್ಲಿ ಹಂಚಿಕೆ ಮಾಡಿರುವ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ಸಿದ್ಧಿ ಶ್ರೀ ಶಿವೆ ಪವರ್ಸ್ ಲಿಮಿಟೆಡ್ ಕಂಪನಿಯ ಹೆಸರಿನಲ್ಲಿ ವರ್ಗಾವಣೆ ಮಾಡಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್.ಬಿ.ಕೃಷ್ಣಪ್ಪನವರ್**

ಪಿ.ಆರ್. 1409 ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ವಿಷಯ** : ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಪರವಾಗಿ ರೂ. 188.65 ಕೋಟಿಗಳನ್ನು ಆರ್.ಟಿ.ಪಿ.ಎಸ್.ನ ಆರ್, ಎಂ. & ಯು ಕೆಲಸಗಳ ಸಾಲಗಳಿಗೆ ಸರ್ಕಾರದ ಖಾತರಿಯನ್ನು ನೀಡುವ ಬಗ್ಗೆ.

**ಓದಲಾಗಿದೆ** : ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಅರೆ ಸರ್ಕಾರಿ ಪತ್ರ ಸಂಖ್ಯೆ: ಎ1 ಎಫ್3 ಬಿ2 ದಿನಾಂಕ: 21.1.2006 ಮತ್ತು ಎ1 ಕ್ಯೂ5 ಡಿ ದಿನಾಂಕ 31.8.2006.

**ಪ್ರಸ್ತಾವನೆ:**

ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ರಾಜ್ಯ ಸರ್ಕಾರದ ಸಂಪೂರ್ಣ ಸ್ವಾಯತ್ತ ಕಂಪನಿಯಾಗಿದ್ದು ರಾಜ್ಯದಲ್ಲಿ ವಿದ್ಯುತ್ ಉತ್ಪಾದನಾ ಯೋಜನೆಗಳ ನಿರ್ಮಾಣ ಕಾರ್ಯಾಚರಣೆ ಮತ್ತು ನಿರ್ವಹಣೆಯನ್ನು ಮಾಡುತ್ತದೆ.

ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ವಿವಿಧ ಜಲ ವಿದ್ಯುತ್ ಯೋಜನೆ ಮತ್ತು ಉಷ್ಣ ಸ್ಥಾವರಗಳಿಂದ ರಾಜ್ಯದಲ್ಲಿ ವಿದ್ಯುತ್‌ನ್ನು ಉತ್ಪಾದಿಸುತ್ತಿದ್ದು ಅದನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ಲಾಭ ಅಥವಾ ನಷ್ಟ ಇಲ್ಲದ ರೀತಿಯಲ್ಲಿ ಮಾರುತ್ತಿದ್ದು ಪ್ರಸ್ತುತ ವಿದ್ಯುತ್‌ನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಮಾರುತ್ತಿದೆ.

ಓದಲಾದ ಪತ್ರಗಳಲ್ಲಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಪವರ್ ಫೈನಾನ್ಸ್ ಕಾರ್ಪೋರೇಷನ್ ಲಿಮಿಟೆಡ್‌ನಿಂದ ರೂ.188.65 ಕೋಟಿ ಸಾಲವನ್ನು ರಾಯಚೂರು ಉಷ್ಣ ಸ್ಥಾವರದ ಆರ್, ಎಂ & ಯು ಕೆಲಸಗಳಿಗಾಗಿ ಪಡೆದಿದ್ದು ಅದಕ್ಕಾಗಿ ಸರ್ಕಾರದ ಖಾತರಿಯನ್ನು ಕೋರಿರುತ್ತದೆ.

ಪ್ರಸ್ತಾವನೆಯನ್ನು ಸರ್ಕಾರ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 8 ಪಿಪಿಸಿ 2006, ಬೆಂಗಳೂರು, ದಿನಾಂಕ : 10ನೇ ಅಕ್ಟೋಬರ್** 2006.

ಮೇಲೆ ಹೇಳಿರುವ ಸಂದರ್ಭಗಳ ಕಾರಣದಿಂದ ಸರ್ಕಾರವು ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಪವರ್ ಫೈನಾನ್ಸ್ ಕಾರ್ಪೋರೇಷನ್ ಲಿಮಿಟೆಡ್‌ನಿಂದ ರೂ.188.65 ಕೋಟಿ (ರೂಪಾಯಿ ಒಂದನೂರ ಎಂಭತ್ತೆಂಟು ಕೋಟಿ ಮತ್ತು ಅರವತ್ತೈದು ಲಕ್ಷಗಳು ಮಾತ್ರ) ಸಾಲವನ್ನು ರಾಯಚೂರು ಉಷ್ಣ ಸ್ಥಾವರದ ಆರ್, ಎಂ & ಯು ಕೆಲಸಗಳಿಗಾಗಿ ಪಡೆದಿರುವ ಬಗ್ಗೆ ಖಾತರಿಯನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಪರವಾಗಿ ನಿಯಮಾನುಸಾರ ಸರ್ಕಾರಕ್ಕೆ ಪಾವತಿಸಬೇಕಾಗಿರುವ ಗ್ಯಾರೆಂಟಿ ಕಮಿಷನ್ನು ಪಾವತಿಸಬೇಕೆಂಬ ಷರತ್ತಿನೊಂದಿಗೆ ನೀಡಿದೆ.

ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಪಿ.ಎಫ್.ಸಿ. ನಿಂದ ಪಡೆಯುವ ಸಾಲದ ಷರತ್ತು ಮತ್ತು ನಿಬಂಧನೆಗೆ ಸಂಬಂಧಿಸಿದಂತೆ ಕಂಡಿಕೆ 17 (1) ರನ್ವಯ ನಿಗಮವು ಸಾಲವನ್ನು ಮರು ಪಾವತಿ ಮಾಡದೆ ಇದ್ದಲ್ಲಿ ಅಥವಾ ಕರ್ನಾಟಕ ವಿದ್ಯುತ್ ನಿಗಮವು ಪಿ.ಎಫ್.ಸಿ. ಯ ಸಾಲವನ್ನು ಪೂರ್ಣವಾಗಿ ಪಾವತಿಸಿದ ನಂತರವೇ ಇತರ ಸಾಲಗಳನ್ನು ಮರು ಪಾವತಿಸಬೇಕೆಂದಾಗಲಿ ಎಂದು ರಾಜ್ಯ ಸರ್ಕಾರವು ಯಾವುದೇ ಮುಚ್ಚಳಿಕೆಯನ್ನು ನೀಡುವುದಿಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 53 ಆರ್‌ಎಲ್‌ಜಿ 2006 ದಿನಾಂಕ: 6.9.2006 ರಲ್ಲಿ ಸಹಮತಿಯನ್ನು ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್.ಬಿ.ಕೃಷ್ಣಪ್ಪನವರ್**

ಪಿ.ಆರ್. 1485 ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

## ENERGY SECRETARIAT

**Sub :** Transfer of 0.8 MW Wind Power Capacity in favour of Mr. Rahul Dravid-reg.

**Read :** 1. Government Order No: DE 26 NCE 1999 dated: 13.5.1999.

2. Government Order No : EN 319 NCE 2005, dated : 25.10.2005.

3. Letter No : KRED / 08 / RD / 2006 / 2121 dated: 26.9.2006 received from the Managing Director, Karnataka Renewable Energy Development Limited, Bangalore.

**PREAMBLE**:

In the Government Order read at (2) above, sanction has been accorded for implementation of 16 MW capacity Wind Power Project at Shirhatti Taluk, Gadag District in favour M/s Enercon India Limited.

Now, the Managing Director, Karnataka Renewable Energy Development Limited, Bangalore, in his letter dated : 26.9.2006 read at (3) above, has recommended to the Government for transfer of 0.8 MW Wind Power capacity in favour of Mr. Rahul Dravid at Machinahalli village of Shirhatti Taluk, Gadag District from M/s Enercon India Limited.

The proposal has been examined at the Government level and hence the order :-

**Government Order No: EN 394 NCE 2006, Bangalore, Dated: 12th October 2006.**

Government accords approval for transfer of 0.8 MW Wind Power capacity in favour of Mr. Rahul Dravid at Machinahalli village of Shirhatti Taluk, Gadag District from M/s Enercon India Limited.

The terms and conditions of the Government Order read at (1) above, shall **IPSO FACTO** applicable.

By Order and in the name of Governor of Karnataka,
**SURESH.B.KRISHNAPPANAVAR**
Under Secretary to Government,
Energy Department.

P.R. 1507

**Sub :** Transfer of 4.00 MW Wind Power Capacity in favour of M/s Bhuruka Gases Limited-reg.

**Read :** 1. Government Order No: DE 26 NCE 1999 dated: 13.5.1999.
2. Government Order No : EN 136 NCE 2006, dated : 23.03.2006.
3. Letter No : KRED / 08 / BPCL / 2006 / 2168 dated: 5.10.2006 received from the Managing Director, Karnataka Renewable Energy Development Limited, Bangalore.

**PREAMBLE**:

In the Government Order read at (2) above, sanction has been accorded for implementation of 11.55 MW capacity Wind Power Project at Naragund Gadag District in favour M/s Bhoruka Power Corporation Limited.

Now, the Managing Director, Karnataka Renewable Energy Development Limited, Bangalore, in his letter dated : 5.10.2006 read at (3) above, has recommended to the Government for transfer of 4.00 MW Wind Power capacity in favour of M/s Bhuruka Gases Limited at Naragund village, Naragund Taluk, Gadag District from M/s Bhoruka Power Corporation Limited.

The proposal has been examined at the Government level and hence the order :-

**Government Order No: EN 399 NCE 2006, Bangalore, Dated: 11th October 2006.**

Government accords approval for transfer of 4.00 MW Wind Power capacity in favour of M/s Bhuruka Gases Limited at Naragund village, Naragund Taluk, Gadag District from M/s Bhoruka Power Corporation Limited.

The terms and conditions of the Government Order read at (1) above, shall **IPSO FACTO** applicable.

By Order and in the name of Governor of Karnataka,
**SURESH.B.KRISHNAPPANAVAR**
Under Secretary to Government,
Energy Department.

P.R. 1508

**Sub** : Transfer of 15.00 M.W. Wind Power Capacity (Wind Mill Project) in favour of M/s VRL Logistics Limited (Phase-4)-reg.

**Read** : 1. Government order No: DE 26 NCE 1999 dated: 13.5.1999.
2. Government order No: EN 80 NCE 2005 dated: 18.3.2005.
3. Letter No: KRED/08/VRL-SEL/2006/ 2183 dated : 9.10.2006 received from the Managing Director, Karnataka Renewable Energy Development Limited, Bangalore.

**PREAMBLE:**

In the Government Order dated 18.3.2005 read at (2) above, sanction has been accorded for implementation of 100.00 MW capacity Wind Power Project (Wind Mill Project) at Gadag District to M/s Suzlon Energy Limited.

Now, the Managing Director, Karnataka Renewable Energy Development Limited, Bangalore in his letter dated : 9.10.2006 read at (3) above, has recommended to the Government for transfer of 15.00 MW Wind Power capacity (Wind Mill Project) in favour of M/s VRL Logistics Limited (Phase-4) from out of

sanctioned 100.00 MW Wind Power Capacity at Hirevadatti, Keluru and Chikkavaddati villages of Mundaragi Taluk, Gadag District to M/s Suzlon Energy Limited.

The proposal has been examined at the Government level and hence the order:

**Government Order No: EN 404 NCE 2006, Bangalore, Dated: 12th October 2006.**

Government accords approval for transfer of 15.00 MW Wind Power capacity (Wind Mill Project) in favour of M/s VRL Logistics Limited (Phase-4) from out of sanctioned 100.00 MW Wind Power Capacity at Hirevadatti, Keluru and Chikkavaddati villages of Mundaragi Taluk, Gadag District to M/s Suzlon Energy Limited.

The terms and conditions of the Government Order read at (1) above, shall **IPSO FACTO** applicable.

By Order and in the name of Governor of Karnataka,
**SURESH.B.KRISHNAPPANAVAR**
Under Secretary To Government,
Energy Department.

P.R. 1509

**Sub** : Transfer of 5.00 M.W. Wind Power Capacity (Wind Mill Project) in favour of M/s VRL Logistics Limited (Phase-3)-reg.

**Read** : 1. Government order No: DE 26 NCE 1999 dated: 13.5.1999.
2. Government order No: EN 80 NCE 2005 dated: 18.3.2005.
3. Letter No: KRED/08/VRLLL-Phase-3-SEL/2006/ 2182 dated : 9.10.2006 received from the Managing Director, Karnataka Renewable Energy Development Limited, Bangalore.

**PREAMBLE:**

In the Government Order dated 18.3.2005 read at (2) above, sanction has been accorded for implementation of 100.00 MW capacity Wind Power Project (Wind Mill Project) at Gadag District to M/s Suzlon Energy Limited.

Now, the Managing Director, Karnataka Renewable Energy Development Limited, Bangalore in his letter dated : 9.10.2006 read at (3) above, has recommended to the Government for transfer of 5.00 MW Wind Power capacity (Wind Mill Project) in favour of M/s VRL Logistics Limited (Phase-3) from out of sanctioned 100.00 MW Wind Power Capacity at Harugeri village, Mundaragi Taluk, Gadag District to M/s Suzlon Energy Limited.

The proposal has been examined at the Government level and hence the order:

**Government Order No: EN 405 NCE 2006, Bangalore, Dated: 12th October 2006.**

Government accords approval for transfer of 5.00 MW Wind Power capacity (Wind Mill Project) in favour of M/s VRL Logistics Limited (Phase-3) from out of sanctioned 100.00 MW Wind Power Capacity at Harugeri village, Mundaragi Taluk, Gadag District to M/s Suzlon Energy Limited.

The terms and conditions of the Government Order read at (1) above, shall **IPSO FACTO** applicable.

By Order and in the name of Governor of Karnataka,
**SURESH.B.KRISHNAPPANAVAR**
Under Secretary to Government,
Energy Department.

P.R. 1510

**Sub** : Transfer of 1.25 MW Wind Power Capacity (Wind Mill Project) in favour of M/s Jindal Steels-reg.

**Read** : 1. Government order No: DE 26 NCE 1999 dated: 13.5.1999.
2. Government order No: EN 80 NCE 2005 dated: 18.3.2005.
3. Letter No: KRED/08/JS-SEL/2006/ 2181 dated : 9.10.2006 received from the Managing Director, Karnataka Renewable Energy Development Limited, Bangalore.

**PREAMBLE:**

In the Government Order dated 18.3.2005 read at (2) above, sanction has been accorded for implementation of 100.00 MW capacity Wind Power Project (Wind Mill Project) at Gadag District to M/s Suzlon Energy Limited.

Now, the Managing Director, Karnataka Renewable Energy Development Limited, Bangalore in his letter dated : 9.10.2006 read at (3) above, has recommended to the Government for transfer of 1.25 MW Wind Power capacity (Wind Mill Project) in favour of M/s Jindal Steels from out of sanctioned 100.00 MW Wind Power Capacity at Harugeri village, Mundaragi Taluk, Gadag District to M/s Suzlon Energy Limited.

The proposal has been examined at the Government level and hence the order:

**Government Order No: EN 406 NCE 2006, Bangalore, Dated: 12th October 2006.**

Government accords approval for transfer of 1.25 MW Wind Power capacity (Wind Mill Project) in favour of M/s Jindal Steels from out of sanctioned 100.00 MW Wind Power Capacity at Harugeri village, Mundaragi Taluk, Gadag District to M/s Suzlon Energy Limited.

The terms and conditions of the Government Order read at (1) above, shall **IPSO FACTO** applicable.

By Order and in the name of Governor of Karnataka,
**SURESH.B.KRISHNAPPANAVAR**
Under Secretary to Government,
Energy Department.

P.R. 1511

**Sub :** Enhancement of allotted capacity of Wind Power Project from 5 M.W. to 9.9 M.W. by M/s NEG Micon (India) Pvt. Limited - reg

**Read :** 1. Government Order No : DE 247 NCE 2002, dated : 05.3.2003.

2. Letter No : KRED / 08 / NEG / 2006 / 2193, dated : 12.10.2006 received from the Managing Director, Karnataka Renewable Energy Development Limited, Bangalore.

**PREAMBLE** :

In the Government order read at (1) above, the sanction has been accorded to implement 5 M.W. capacity Wind Power Project at Devanakattti Village of Belgaum District to M/s NEG Micon (India) Pvt. Limited.

After the assessment of wind potential and flow of the wind in the allotted site, the Managing Director, Karnataka Renewable Energy Development Limited, Bangalore, has recommended to Government to enhance the capacity from 5 M.W. to 9.9 M.W. vide his letter read at (2) above.

The proposal has been examined and hence the order :

**Government Order No : EN 409 NCE 2006, Bangalore, Dated : 18th October 2006.**

Government accords approval for enhancement of wind power capacity from 5 M.W. to 9.9 M.W. in favour of M/s NEG Micon (India) Pvt. Limited, at Devanakattti Village of Belgaum District as detailed below:

A ridge with 774 and 772 M elevation oriented in North West to South East and South of Devanakatti village covered in Latitude: $16^0$ 23'-$16^0$ 25'N Longitude : $74^0$ 45'-$74^0$ 47'E.

The other terms and conditions of the allotment order shall continue as it is.

By Order and in the Name of the Governor of Karnataka.
**Suresh.B.Krishnappanavar**
Under Secretary to Government,
Energy Department.

P.R. 1515

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಶ್ರೀರಂಗಪಟ್ಟಣ ಚನ್ನರಾಯಪಟ್ಟಣ ರಸ್ತೆಯ (ಸರಪಳಿ 4.00 ಕಿಮೀ) ದರಸಗುಪ್ಪೆ ಗ್ರಾಮದಿಂದ ನೆಲಮನೆ ಗ್ರಾಮಕ್ಕೆ ಹೋಗುವ ರಸ್ತೆಯನ್ನು (ಸರಪಳಿ 0.00 ರಿಂದ 3.00 ಕಿಮೀ) ಜಿಲ್ಲಾ ಮುಖ್ಯರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ: ಸಂಕದ: ರಶಾ: ಸಇಂ–5: ಶ್ರೀರಂಗ: ಮೇಲ್ದರ್ಜೆ:2006–07, ದಿನಾಂಕ: 26–9–2006.

**ಪ್ರಸ್ತಾವನೆ :–**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಶ್ರೀರಂಗಪಟ್ಟಣ ಚನ್ನರಾಯಪಟ್ಟಣ ರಸ್ತೆಯ (ಸರಪಳಿ 4.00 ಕಿಮೀ)ದರಸಗುಪ್ಪೆ ಗ್ರಾಮದಿಂದ ನೆಲಮನೆ ಗ್ರಾಮಕ್ಕೆ ಹೋಗುವ ರಸ್ತೆಯನ್ನು (ಸರಪಳಿ 0.00 ರಿಂದ 3.00 ಕಿಮೀ) ಜಿಲ್ಲಾ ಮುಖ್ಯರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 277 ಸಿಆರ್‌ಎಂ 2006, ಬೆಂಗಳೂರು, ದಿನಾಂಕ: 29ನೇ ಸೆಪ್ಟೆಂಬರ್ 2006**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಶ್ರೀರಂಗಪಟ್ಟಣ ಚನ್ನರಾಯಪಟ್ಟಣ ರಸ್ತೆಯ (ಸರಪಳಿ 4.00 ಕಿಮೀ) ದರಸಗುಪ್ಪೆ ಗ್ರಾಮದಿಂದ ನೆಲಮನೆ ಗ್ರಾಮದವರೆಗೆ ರಸ್ತೆ (ಸರಪಳಿ 0.00 ರಿಂದ 3.00 ಕಿಮೀ) ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ನಿಯಮಾನುಸಾರ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಜಿ.ನಾರಾಯಣ**

ಪಿ.ಆರ್. 1477

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸಂಪರ್ಕ).

**ವಿಷಯ:** ಕೋಲಾರ ಜಿಲ್ಲೆ, ಬಾಗೇಪಲ್ಲಿ ತಾಲ್ಲೂಕಿನಲ್ಲಿ ಬರುವ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ: ಸಂಕದ:ರಶಾ: ಸಇಂ-6: ಕೋಲಾರ:ಮೇಲ್ದರ್ಜೆ: 2006-07, ದಿನಾಂಕ: ------

**ಪ್ರಸ್ತಾವನೆ :-**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಕೋಲಾರ ಜಿಲ್ಲೆ ಬಾಗೇಪಲ್ಲಿ ತಾಲ್ಲೂಕಿಗೆ ಸಂಬಂಧಿಸಿದಂತೆ ಒಂದು ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಯು ದುಸ್ಥಿತಿಯಲ್ಲಿದ್ದು, ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಗ್ರಾಮೀಣ ರಸ್ತೆಯನ್ನು ಸಾರ್ವಜನಿಕರ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರಮ ಸಂಖ್ಯೆ | ರಸ್ತೆಯ ವಿವರಗಳು | ಉದ್ದ (ಕಿ.ಮೀ) |
|---|---|---|
| 1 | ಬಾಗೇಪಲ್ಲಿ ತಾಲ್ಲೂಕಿನಲ್ಲಿ ಬರುವ ರಾಜ್ಯ ಹೆದ್ದಾರಿ-5 ರಿಂದ ಗುಂಡ್ಲಪಲ್ಲಿ, ಜಿಲಕರಪಲ್ಲಿ, ತಿಮ್ಮಕಲಪಲ್ಲಿ ಮಾರ್ಗವಾಗಿ ಬಾಗೇಪಲ್ಲಿ ಪಟ್ಟಣದಲ್ಲಿ ರಾಜ್ಯ ಹೆದ್ದಾರಿ-5 ನ್ನು ಸೇರುವ ರಸ್ತೆ. | 5.50 |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 133 ಸಿಆರ್‌ಎಂ 2006, ಬೆಂಗಳೂರು, ದಿನಾಂಕ:09ನೇ ಅಕ್ಟೋಬರ್ 2006**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಕೆಳಕಂಡ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ನಿಯಮಾನುಸಾರ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ರಸ್ತೆಯ ವಿವರಗಳು | ಉದ್ದ (ಕಿ.ಮೀ) |
|---|---|---|
| 1 | ಬಾಗೇಪಲ್ಲಿ ತಾಲ್ಲೂಕಿನಲ್ಲಿ ಬರುವ ರಾಜ್ಯ ಹೆದ್ದಾರಿ-5 ರಿಂದ ಗುಂಡ್ಲಪಲ್ಲಿ, ಜಿಲಕರಪಲ್ಲಿ, ತಿಮ್ಮಕಲಪಲ್ಲಿ ಮಾರ್ಗವಾಗಿ ಬಾಗೇಪಲ್ಲಿ ಪಟ್ಟಣದಲ್ಲಿ ರಾಜ್ಯ ಹೆದ್ದಾರಿ-5 ನ್ನು ಸೇರುವ ರಸ್ತೆ. | 5.50 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಜಿ.ನಾರಾಯಣ**

ಪಿ.ಆರ್. 1491

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸಂಪರ್ಕ).

**ವಿಷಯ:** ಹೊಳೆನರಸೀಪುರ ಹಾಗೂ ಹಾಸನ ತಾಲ್ಲೂಕಿನ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ: ಲೋಇ: ಹಾವೃಹಾ: ಸಇಂ-1: ಹೊನಪುರ:ಕಾ.ಪಟ್ಟಿ: 2006-07, ದಿನಾಂಕ: 01-7-2006.

**ಪ್ರಸ್ತಾವನೆ :-**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಹೊಳೆನರಸೀಪುರ ಹಾಗೂ ಹಾಸನ ತಾಲ್ಲೂಕಿಗೆ ಸಂಬಂಧಿಸಿದಂತೆ ಎರಡು (2) ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಗಳು ದುಸ್ಥಿತಿಯಲ್ಲಿದ್ದು, ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಸಾರ್ವಜನಿಕರ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರಮ ಸಂಖ್ಯೆ | ರಸ್ತೆಯ ವಿವರಗಳು | ಉದ್ದ (ಕಿ.ಮೀ) |
|---|---|---|
| 1 | ಗೊರೂರು – ಚಿನಕುರಳಿ ರಸ್ತೆಯಿಂದ ಮುತ್ತಿಗೇ ಹಿರೇಹಳ್ಳಿ. | 3.00 |
| 2 | ಡಣಾಯಕನಹಳ್ಳಿ, ಮೂಡಲಕೊಪ್ಪಲು – ಹರದನಹಳ್ಳಿ ಸೇರುವ ರಸ್ತೆ. | 1.50 |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 159 ಸಿಆರ್‌ಎಂ 2006, ಬೆಂಗಳೂರು, ದಿನಾಂಕ: 09 ನೇ ಅಕ್ಟೋಬರ್** 2006

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ನಿಯಮಾನುಸಾರ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ರಸ್ತೆಯ ವಿವರಗಳು | ಉದ್ದ (ಕಿ.ಮೀ) |
|---|---|---|
| 1 | ಗೊರೂರು – ಚಿನಕುರಳಿ ರಸ್ತೆಯಿಂದ ಮುತ್ತಿಗೇ ಹಿರೇಹಳ್ಳಿ. | 3.00 |
| 2 | ಡಣಾಯಕನಹಳ್ಳಿ, ಮೂಡಲಕೊಪ್ಪಲು – ಹರದನಹಳ್ಳಿ ಸೇರುವ ರಸ್ತೆ. | 1.50 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಜಿ.ನಾರಾಯಣ**

ಪಿ.ಆರ್. 1492

ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ ಇಲಾಖೆ (ಸಂಪರ್ಕ).

**ವಿಷಯ:** ಮೈಸೂರು ಜಿಲ್ಲೆ, ಕೆ.ಆರ್.ನಗರ ತಾಲ್ಲೂಕಿನ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ: ಸಂಕದ: ರಶಾ: ಸಇಂ–1: ಮೇಲ್ದರ್ಜೆ:2005–06, ದಿನಾಂಕ: 28–9–2006.

**ಪ್ರಸ್ತಾವನೆ :–**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಮೈಸೂರು ಜಿಲ್ಲೆ, ಕೆ.ಆರ್.ನಗರ ತಾಲ್ಲೂಕಿನ 3 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಗಳು ಸಂಪರ್ಕ ಕಲ್ಪಿಸುವ ಅತಿ ಮುಖ್ಯ ರಸ್ತೆಯಾಗಿದ್ದು, ಈ ರಸ್ತೆಗಳನ್ನು ಬಹಳ ವರ್ಷಗಳಿಂದ ಅಭಿವೃದ್ಧಿಪಡಿಸಿರುವುದಿಲ್ಲ. ಮತ್ತು ಸಂಚಾರಕ್ಕೆ ತುಂಬಾ ತೊಂದರೆಯಾಗಿರುತ್ತದೆ. ಈ ಹಿನ್ನೆಲೆಯಲ್ಲಿ 3 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರಮ ಸಂಖ್ಯೆ | ರಸ್ತೆಯ ವಿವರಗಳು | ಉದ್ದ (ಕಿ.ಮೀ) |
|---|---|---|
| 1 | ಬಿ.ಬಿ.ರಸ್ತೆಯಿಂದ ಬಸವರಾಜಪುರ–ಲಾಳಂದೇವನಹಳ್ಳಿ–ಮಾರ್ಚಹಳ್ಳಿ ಮಾರ್ಗವಾಗಿ ಮೂಲೆಪೆಟ್ಲು ಸೇರುವ ರಸ್ತೆ. | 10.50 |
| 2 | ಹೊಳೆನರಸೀಪುರ–ಕೆ.ಆರ್.ನಗರ ರಾಜ್ಯ ಹೆದ್ದಾರಿಯಿಂದ ಕೆ.ಆರ್.ನಗರ–ಮಳಲಿ – ಹೊಸಕೋಟೆ–ರಾವಂಡುರು ರಸ್ತೆಯನ್ನು ಸೇರುವ ರಸ್ತೆ. (ಮಾರ್ಗ ಬೀರನಹಳ್ಳಿ) | 3.50 |
| 3 | ರಾಮನಾಥಪುರ–ತೆರಕಣಾಂಬಿ ರಸ್ತೆಯಿಂದ ಸಾಲೇಕೊಪ್ಪಲು ಮಾರ್ಗ (ಆಶ್ರಮ) ಕಾಳೇನಹಳ್ಳಿ–ಹೊಸೂರು ರಸ್ತೆಯನ್ನು ಸೇರುವ ರಸ್ತೆ. | 5.20 |
| | **ಒಟ್ಟು** | **19.20** |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 281 ಸಿಆರ್‌ಎಂ 2006, ಬೆಂಗಳೂರು, ದಿನಾಂಕ:** 30ನೇ ಸೆಪ್ಟೆಂಬರ್ 2006

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ನಿಯಮಾನುಸಾರ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ರಸ್ತೆಯ ವಿವರಗಳು | ಉದ್ದ (ಕಿ.ಮೀ) |
|---|---|---|
| 1 | ಬಿ.ಬಿ.ರಸ್ತೆಯಿಂದ ಬಸವರಾಜಪುರ–ಲಾಳಂದೇವನಹಳ್ಳಿ–ಮಾರ್ಚಹಳ್ಳಿ ಮಾರ್ಗವಾಗಿ ಮೂಲೆಪೆಟ್ಲು ಸೇರುವ ರಸ್ತೆ. | 10.50 |
| 2 | ಹೊಳೆನರಸೀಪುರ–ಕೆ.ಆರ್.ನಗರ ರಾಜ್ಯ ಹೆದ್ದಾರಿಯಿಂದ ಕೆ.ಆರ್.ನಗರ–ಮಳಲಿ – ಹೊಸಕೋಟೆ–ರಾವಂಡುರು ರಸ್ತೆಯನ್ನು ಸೇರುವ ರಸ್ತೆ. (ಮಾರ್ಗ ಬೀರನಹಳ್ಳಿ) | 3.50 |
| 3 | ರಾಮನಾಥಪುರ–ತೆರಕಣಾಂಬಿ ರಸ್ತೆಯಿಂದ ಸಾಲೇಕೊಪ್ಪಲು ಮಾರ್ಗ (ಆಶ್ರಮ) ಕಾಳೇನಹಳ್ಳಿ–ಹೊಸೂರು ರಸ್ತೆಯನ್ನು ಸೇರುವ ರಸ್ತೆ. | 5.20 |
| | **ಒಟ್ಟು** | **19.20** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಜಿ.ನಾರಾಯಣ**

ಪಿ.ಆರ್. 1479

ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ ಇಲಾಖೆ (ಸಂಪರ್ಕ).

**ವಿಷಯ:** ಗುಲ್ಬರ್ಗಾ ಜಿಲ್ಲೆಯ ಅಫಜಲಪೂರ ತಾಲ್ಲೂಕಿನಲ್ಲಿ ಬರುವ ಐದು ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ(ಉತ್ತರ) ಧಾರವಾಡ'ರವರ ಪತ್ರಸಂಖ್ಯೆ:ಸಿಬಿಎನ್:ಹೆದ್ದಾರಿ ಕಾಯ್ದೆಕೋಶ:ಕ.ಸಂ.2:ಗ್ರಾ.ರ.ಮೇ:06–07:ನಂ.5775 ದಿನಾಂಕ:22–9–2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ(ಉತ್ತರ) ಧಾರವಾಡ ಇವರು ಗುಲ್ಬರ್ಗಾ ಜಿಲ್ಲೆಯ, ಅಫಜಲಪೂರ ತಾಲ್ಲೂಕಿನ ಈ ಕೆಳಕಂಡ ಐದು ಗ್ರಾಮೀಣ ರಸ್ತೆಗಳು ಇಂಡಿಯನ್ ರೋಡ್ ಕಾಂಗ್ರೆಸ್ (ಐ.ಆರ್.ಸಿ.ನಾಮ್ಸ್) ಮಾನದಂಡದ ಮಾರ್ಗಸೂಚಿಯಲ್ಲಿ ಬರುವುದಾಗಿ ಹಾಗೂ ಹಿಂದುಳಿದ ತಾಲ್ಲೂಕಿನ ಅಭಿವೃದ್ಧಿ ಮತ್ತು ಸಾರ್ವಜನಿಕರ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ವರದಿ ಮಾಡಿರುತ್ತಾರೆ.

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಕಿ.ಮೀ |
|---|---|---|
| 1 | ಮಣ್ಣೂರದಿಂದ ಇಂಡಿ ತಾಲ್ಲೂಕಾ ಗಡಿಯವರೆಗೆ (ಕಿಮೀ.0.00 ದಿಂದ 3.00 ರವರೆಗೆ) | 3.00 |
| 2 | ಶೇಷಗಿರಿವಾಡಿ ಕೂಡು ರಸ್ತೆ (ಮಣ್ಣೂರ–ಇಂಡಿ ರಸ್ತೆಯಿಂದ) ಕಿಮೀ.0.00 ದಿಂದ 3.50 ರವರೆಗೆ. | 3.50 |
| 3 | ಅಫಜಲಪೂರದಿಂದ ದೇವಲಗಾಣಗಾಪೂರ ರಸ್ತೆ ವಯಾ ಅನೂರ (ಕಿಮೀ.0.00 ದಿಂದ 19.00 ರವರೆಗೆ) | 19.00 |
| 4 | ಶಿರವಾಳದಿಂದ ದುದನಿ ರಸ್ತೆ ಮಹಾರಾಷ್ಟ್ರ ರಾಜ್ಯ ಗಡಿಯವರೆಗೆ (ಕಿಮೀ.0.00 ದಿಂದ 10.00 ರವರೆಗೆ) | 10.00 |
| 5 | ಹೀರಾಪೂರದಿಂದ ಪಟ್ಟಣಗಾಣಗಾಪುರ ರಸ್ತೆ ವಯಾ ಬಬಲಾದ (ಎಸ್) ಸಾವಳಗಿ–ಹುಣಸಿಹಡಗಿಲ್–ನೀಲೂರು (ಕಿಮೀ.0.00 ದಿಂದ 22.50) | 22.50 |
| | **ಒಟ್ಟು** | **58.00** |

**ಸರ್ಕಾರದ ಆದೇಶ ಸಂಖ್ಯೆ:ಲೋಇ 278 ಸಿಆರ್‌ಎಂ 06 ಬೆಂಗಳೂರು ದಿನಾಂಕ: 29 ನೇ ಸೆಪ್ಟೆಂಬರ್** 2006

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡರವರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಗುಲ್ಬರ್ಗಾ ಜಿಲ್ಲೆಯ ಅಫಜಲಪೂರ ತಾಲ್ಲೂಕಿನಲ್ಲಿ ಬರುವ ಐದು ಗ್ರಾಮೀಣ ರಸ್ತೆಗಳ ಸುಧಾರಣಾ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳುವುದು ಬಹಳ ಅಗತ್ಯವಿರುವುದರಿಂದ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ, ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಕಿ.ಮೀ |
|---|---|---|
| 1 | ಮಣ್ಣೂರದಿಂದ ಇಂಡಿ ತಾಲ್ಲೂಕಾ ಗಡಿಯವರೆಗೆ (ಕಿಮೀ.0.00 ದಿಂದ 3.00 ರವರೆಗೆ) | 3.00 |
| 2 | ಶೇಷಗಿರಿವಾಡಿ ಕೂಡು ರಸ್ತೆ (ಮಣ್ಣೂರ–ಇಂಡಿ ರಸ್ತೆಯಿಂದ) ಕಿಮೀ.0.00 ದಿಂದ 3.50 ರವರೆಗೆ. | 3.50 |
| 3 | ಅಫಜಲಪೂರದಿಂದ ದೇವಲಗಾಣಗಾಪೂರ ರಸ್ತೆ ವಯಾ ಅನೂರ (ಕಿಮೀ.0.00 ದಿಂದ 19.00 ರವರೆಗೆ) | 19.00 |
| 4 | ಶಿರವಾಳದಿಂದ ದುದನಿ ರಸ್ತೆ ಮಹಾರಾಷ್ಟ್ರ ರಾಜ್ಯ ಗಡಿಯವರೆಗೆ (ಕಿಮೀ.0.00 ದಿಂದ 10.00 ರವರೆಗೆ) | 10.00 |
| 5 | ಹೀರಾಪೂರದಿಂದ ಪಟ್ಟಣಗಾಣಗಾಪುರ ರಸ್ತೆ ವಯಾ ಬಬಲಾದ (ಎಸ್) ಸಾವಳಗಿ–ಹುಣಸಿಹಡಗಿಲ್–ನೀಲೂರು (ಕಿಮೀ.0.00 ದಿಂದ 22.50) | 22.50 |
| | **ಒಟ್ಟು** | **58.00** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಜಿ.ನಾರಾಯಣ**

ಪಿ.ಆರ್. 1478

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸಂಪರ್ಕ)

**ವಿಷಯ:** ಮೈಸೂರು ತಾಲ್ಲೂಕು, ಚಾಮುಂಡೇಶ್ವರಿ ವಿಧಾನಸಭಾ ಕ್ಷೇತ್ರದ ಜಿಲ್ಲಾ ರಸ್ತೆ ಮತ್ತು ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ: ಸಂಕದ: ರಶಾ: ಸಇಂ–1: ಮೈಸೂರು: ಮೇಲ್ದರ್ಜೆ:2006–07, ದಿನಾಂಕ: 26–9–2006.

**ಪ್ರಸ್ತಾವನೆ :–**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಮೈಸೂರು ತಾಲ್ಲೂಕು ಚಾಮುಂಡೇಶ್ವರಿ ವಿಧಾನಸಭಾ ಕ್ಷೇತ್ರದ ಜಿಲ್ಲಾ ರಸ್ತೆ ಮತ್ತು ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಗಳು ದುಸ್ಥಿತಿಯಲ್ಲಿದ್ದು,

ವಾಹನಗಳು ಮತ್ತು ಸಾರ್ವಜನಿಕರು ಸಂಚರಿಸಲು ತುಂಬಾ ತೊಂದರೆಯಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರಮ ಸಂಖ್ಯೆ | ರಸ್ತೆಯ ವಿವರಗಳು | ಉದ್ದ (ಕಿ.ಮೀ) |
|---|---|---|
| 1 | ಸರ್ಕ್ಯೂಟ್ ಹೌಸ್ ರಸ್ತೆಯಿಂದ ಎಡಹಳ್ಳಿ ಮತ್ತು ಸಾಗರಕಟ್ಟೆ ರಸ್ತೆಯನ್ನು ಸೇರುವ ಲೂಪ್ ರಸ್ತೆಗಳು. | 2.80 |
| 2 | ರಾಜ್ಯ ಹೆದ್ದಾರಿ 33 ರಸ್ತೆಯಿಂದ ಲಕ್ಷ್ಮೀಪುರ ಮಾದೇಗೌಡನಹುಂಡಿ, ಗ್ರಾಮದ ಮಾರ್ಗವಾಗಿ ಮೈಸೂರು ತಾಲ್ಲೂಕು ಗಡಿಯವರೆಗೆ | 1.60 |
| 3 | ಇಲವಾಲ – ಸಾಗರಕಟ್ಟೆ ರಸ್ತೆಯ ಎಸ್. ಹೆಮ್ಮನಹಳ್ಳಿಯಿಂದ ಪಂಪ್ ಹೌಸ್‌ವರೆಗೆ | 0.80 |
| | ಒಟ್ಟು | **5.20** |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 276 ಸಿಆರ್‌ಎಂ 2006, ಬೆಂಗಳೂರು, ದಿನಾಂಕ: 29ನೇ ಸೆಪ್ಟೆಂಬರ್ 2006**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ನಿಯಮಾನುಸಾರ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ರಸ್ತೆಯ ವಿವರಗಳು | ಉದ್ದ (ಕಿ.ಮೀ) |
|---|---|---|
| 1 | ಸರ್ಕ್ಯೂಟ್ ಹೌಸ್ ರಸ್ತೆಯಿಂದ ಎಡಹಳ್ಳಿ ಮತ್ತು ಸಾಗರಕಟ್ಟೆ ರಸ್ತೆಯನ್ನು ಸೇರುವ ಲೂಪ್ ರಸ್ತೆಗಳು. | 2.80 |
| 2 | ರಾಜ್ಯ ಹೆದ್ದಾರಿ 33 ರಸ್ತೆಯಿಂದ ಲಕ್ಷ್ಮೀಪುರ ಮಾದೇಗೌಡನಹುಂಡಿ, ಗ್ರಾಮದ ಮಾರ್ಗವಾಗಿ ಮೈಸೂರು ತಾಲ್ಲೂಕು ಗಡಿಯವರೆಗೆ | 1.60 |
| 3 | ಇಲವಾಲ – ಸಾಗರಕಟ್ಟೆ ರಸ್ತೆಯ ಎಸ್. ಹೆಮ್ಮನಹಳ್ಳಿಯಿಂದ ಪಂಪ್ ಹೌಸ್‌ವರೆಗೆ | 0.80 |
| | ಒಟ್ಟು | **5.20** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಜಿ. ನಾರಾಯಣ**

ಪಿ.ಆರ್. 1476

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸಂಪರ್ಕ).

**ವಿಷಯ**: ಮೈಸೂರು ತಾಲ್ಲೂಕು ಚಾಮುಂಡೇಶ್ವರಿ ಮತ್ತು ಕೃಷ್ಣರಾಜನಗರ ವಿಧಾನಸಭಾ ಕ್ಷೇತ್ರದಲ್ಲಿ ಜಿಲ್ಲಾ ಮುಖ್ಯ ರಸ್ತೆಗಳನ್ನು ರಾಜ್ಯ ಹೆದ್ದಾರಿಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ**: ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ(ದಕ್ಷಿಣ) ಇವರ ಪತ್ರಸಂಖ್ಯೆ:ಮುಇಂ:ಸಂಕದ: ರಸ್ತೆ ಶಾಖೆ:ಮೇಲ್ದರ್ಜೆ:ಸಇಂ–13:05–06 ದಿನಾಂಕ:30.9.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ(ದಕ್ಷಿಣ) ಬೆಂಗಳೂರು ಇವರು ಮೈಸೂರು ತಾಲ್ಲೂಕು ಚಾಮುಂಡೇಶ್ವರಿ ಮತ್ತು ಕೃಷ್ಣರಾಜನಗರ ವಿಧಾನಸಭಾ ಕ್ಷೇತ್ರದ ಜಿಲ್ಲಾ ಮುಖ್ಯ ರಸ್ತೆಗಳನ್ನು ರಾಜ್ಯ ಹೆದ್ದಾರಿಗಳನ್ನಾಗಿ ಮೇಲ್ದರ್ಜೆಗೇರಿಸಬೇಕೆಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಇವರು ಶಿಫಾರಸ್ಸು ಮಾಡಿರುತ್ತಾರೆ. ಆದುದರಿಂದ ಈ ಕೆಳಗಿನ ಆದೇಶ.

| ಕ್ರ. ಸಂ. | ರಾಜ್ಯ ಹೆದ್ದಾರಿ ಸಂಖ್ಯೆ | ರಾಜ್ಯ ಹೆದ್ದಾರಿಗಳನ್ನಾಗಿ ಮೇಲ್ದರ್ಜೆಗೇರಿಸುವ ವಿವರ | ರಾಜ್ಯ ಹೆದ್ದಾರಿಯ ಉದ್ದ(ಕಿಮೀ) |
|---|---|---|---|
| 1 | 117 | ಇಲವಾಲದಿಂದ–ಕೆ.ಆರ್.ನಗರ ರಸ್ತೆ ಮಾರ್ಗ ಹೊಸಕೋಟೆ, ಸಾಗರಕಟ್ಟೆ, ಮೂಲೆಪೆಟ್ಲು, ಲಾಳಂ ದೇವನಹಳ್ಳಿ. | 22.00 |

**ಸರ್ಕಾರದ ಆದೇಶ ಸಂಖ್ಯೆ:ಲೋಇ 282 ಸಿಆರ್‌ಎಂ 06 ಬೆಂಗಳೂರು ದಿನಾಂಕ: 30ನೇ ಸೆಪ್ಟೆಂಬರ್ 2006**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಮೈಸೂರು ತಾಲ್ಲೂಕು ಚಾಮುಂಡೇಶ್ವರಿ ಮತ್ತು ಕೃಷ್ಣರಾಜನಗರ ವಿಧಾನಸಭಾ ಕ್ಷೇತ್ರದ ಜಿಲ್ಲಾ ಮುಖ್ಯ ರಸ್ತೆಗಳನ್ನು ರಾಜ್ಯ ಹೆದ್ದಾರಿಯನ್ನಾಗಿ ನಾಮಕರಣ ಮಾಡಿ ಘೋಷಿಸಿದೆ.

| ಕ್ರ. ಸಂ. | ರಾಜ್ಯ ಹೆದ್ದಾರಿ ಸಂಖ್ಯೆ | ರಾಜ್ಯ ಹೆದ್ದಾರಿಗಳನ್ನಾಗಿ ಮೇಲ್ದರ್ಜೆಗೇರಿಸುವ ವಿವರ | ರಾಜ್ಯ ಹೆದ್ದಾರಿಯ ಉದ್ದ(ಕಿಮೀ) |
|---|---|---|---|
| 1 | 117 | ಇಲವಾಲದಿಂದ-ಕೆ.ಆರ್.ನಗರ ರಸ್ತೆ ಮಾರ್ಗ ಹೊಸಕೋಟೆ, ಸಾಗರಕಟ್ಟೆ, ಮೂಲೆಪೆಟ್ಲು, ಲಾಳಂ ದೇವನಹಳ್ಳಿ. | 22.00 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಜಿ.ನಾರಾಯಣ**

ಪಿ.ಆರ್. 1480

ಸರ್ಕಾರದ ಅಧೀನ ಕಾರ್ಯದರ್ಶಿ

ಲೋಕೋಪಯೋಗಿ ಇಲಾಖೆ (ಸಂಪರ್ಕ)

**ವಿಷಯ:** ದಕ್ಷಿಣ ಕನ್ನಡ ಜಿಲ್ಲೆ, ಬೆಳ್ತಂಗಡಿ ತಾಲ್ಲೂಕಿನಲ್ಲಿ ಬರುವ ಗುರುವಾಯನಕೆರೆ ಉಪ್ಪಿನಂಗಡಿ ಜಿಲ್ಲಾ ಮುಖ್ಯ ರಸ್ತೆಯನ್ನು ರಾಜ್ಯ ಹೆದ್ದಾರಿಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ(ದಕ್ಷಿಣ) ಇವರ ಪತ್ರಸಂಖ್ಯೆ:ಮುಇಂ:ರಸ್ತೆಶಾಖೆ:ಸಇಂ-4:ಎಂಡಿಆರ್ ಇಂದ ಎಸ್‌ಹೆಚ್: ಗುರುವಾಯನಕೆರೆ ಉಪ್ಪಿನಂಗಡಿ: 06-07 ದಿನಾಂಕ:12.5.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಇವರು ದಕ್ಷಿಣ ಕನ್ನಡ ಜಿಲ್ಲೆ, ಬೆಳ್ತಂಗಡಿ ತಾಲ್ಲೂಕಿನಲ್ಲಿ ಬರುವ ಗುರುವಾಯನಕೆರೆ ಉಪ್ಪಿನಂಗಡಿ ಜಿಲ್ಲಾ ಮುಖ್ಯ ರಸ್ತೆಯನ್ನು ರಾಜ್ಯ ಹೆದ್ದಾರಿಯನ್ನಾಗಿ ಮೇಲ್ದರ್ಜೆಗೇರಿಸುವಂತೆ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಇವರು ಶಿಫಾರಸ್ಸು ಮಾಡಿರುತ್ತಾರೆ.

| ಕ್ರ. ಸಂ. | ರಾಜ್ಯ ಹೆದ್ದಾರಿ ಸಂಖ್ಯೆ | ರಾಜ್ಯ ಹೆದ್ದಾರಿಗಳನ್ನಾಗಿ ಮೇಲ್ದರ್ಜೆಗೇರಿಸುವ ವಿವರ | ರಾಜ್ಯ ಹೆದ್ದಾರಿಯ ಉದ್ದ(ಕಿಮೀ) |
|---|---|---|---|
| 1 | 118 | ಗುರುವಾಯನಕೆರೆ - ಉಪ್ಪಿನಂಗಡಿ ರಸ್ತೆ. | 20.40 |

**ಸರ್ಕಾರದ ಆದೇಶ ಸಂಖ್ಯೆ:ಲೋಇ 190 ಸಿಆರ್‌ಎಂ 06 ಬೆಂಗಳೂರು ದಿನಾಂಕ:12ನೇ ಅಕ್ಟೋಬರ್ 2006**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ, ದಕ್ಷಿಣಕನ್ನಡ ಜಿಲ್ಲೆ, ಬೆಳ್ತಂಗಡಿ ತಾಲ್ಲೂಕಿನಲ್ಲಿ ಬರುವ ಗುರುವಾಯನಕೆರೆ ಉಪ್ಪಿನಂಗಡಿ ರಸ್ತೆ 20.40 ಕಿ.ಮೀ. ಉದ್ದದ ರಸ್ತೆಯನ್ನು ರಾಜ್ಯ ಹೆದ್ದಾರಿ ಎಂದು ಹಾಗೂ **ರಾಜ್ಯ ಹೆದ್ದಾರಿ ಸಂಖ್ಯೆ 118** ಎಂದು ನಾಮಕರಣ ಮಾಡಿ ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಜಿ.ನಾರಾಯಣ**

ಪಿ.ಆರ್. 1517

ಸರ್ಕಾರದ ಅಧೀನ ಕಾರ್ಯದರ್ಶಿ

ಲೋಕೋಪಯೋಗಿ ಇಲಾಖೆ (ಸಂಪರ್ಕ)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಬೆಂಗಳೂರು ನಗರದ ಹನುಮಂತನಗರ, ಹರಿಹರ ಗುಡ್ಡ, ನಾರಾಯಣ ಸ್ವಾಮಿ ಚೌಕಕ್ಕೆ ಹೊಂದಿ ಕೊಂಡಿರುವ ಪ್ರದೇಶದಲ್ಲಿ ಸರ್ವಜ್ಞ ಮೂರ್ತಿ ಪ್ರತಿಮೆ ಸ್ಥಾಪಿಸಲು ಆಧಾರ ಪೀಠ ನಿರ್ಮಾಣಕ್ಕೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ರವರ ಪತ್ರ ಸಂಖ್ಯೆ: ಕಸನಿ/128/ಪ್ರತಿಮೆ:00-2000 ದಿನಾಂಕ: 11-07-2006

**ಪ್ರಸ್ತಾವನೆ:**

ಆಯುಕ್ತರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು ಅವರು ಮೇಲೆ ಓದಲಾದ ದಿನಾಂಕ: 11-07-2006ರ ಪತ್ರದಲ್ಲಿ ಬೆಂಗಳೂರು ನಗರದ ಹನುಮಂತ ನಗರ ಹರಿಹರಗುಡ್ಡ ನಾರಾಯಣಸ್ವಾಮಿ ಚೌಕಕ್ಕೆ ಹೊಂದಿಕೊಂಡ ಪ್ರದೇಶದಲ್ಲಿ ದಾರ್ಶನಿಕ ಕವಿ ಸರ್ವಜ್ಞ ಮೂರ್ತಿಯ ಕಂಚಿನ ಪ್ರತಿಮೆಯನ್ನು ಸ್ಥಾಪಿಸುವ ಸಲುವಾಗಿ ಆಧಾರ ಪೀಠವನ್ನು ನಿರ್ಮಿಸಲು ರೂ.4.25 ಲಕ್ಷಗಳ ಅಂದಾಜನ್ನು ಸಿದ್ಧಪಡಿಸಿ ಸದರಿ ಮೊತ್ತದ ಹಣ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಪ್ರಸ್ತಾವನೆಯನ್ನು ಮಾರ್ಗಸೂಚಿಗಳನ್ವಯ ಪರಿಶೀಲಿಸಲಾಗಿ ಪ್ರತಿಮೆಗೆ ಹಣ ಬಿಡುಗಡೆ ಮಾಡಲು ಸಾಮಾನ್ಯವಾಗಿ ಅಧಿಕಾರವಿದೆ. ಆದರೆ ಇದನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರ ಆದೇಶ ಸಂಖ್ಯೆ: ಸಂಕಇ 12 ಸ್ಮಾಪ್ರನಿ 1999, ಬೆಂಗಳೂರು, ದಿನಾಂಕ: 26ನೇ ಸೆಪ್ಟೆಂಬರ್ 2006**

ದಾರ್ಶನಿಕ ಕವಿ ಸರ್ವಜ್ಞ ಮೂರ್ತಿಯ ಕಂಚಿನ ಪ್ರತಿಮೆಯನ್ನು ಬೆಂಗಳೂರಿನ ಹನುಮಂತನಗರ ಹರಿಹರಗುಡ್ಡ ನಾರಾಯಣಸ್ವಾಮಿ ಚೌಕಕ್ಕೆ ಹೊಂದಿಕೊಂಡ ಪ್ರದೇಶದಲ್ಲಿ ಸ್ಥಾಪಿಸುವ ಸಲುವಾಗಿ ಆಧಾರ ಪೀಠವನ್ನು ನಿರ್ಮಿಸಲು ರೂ. 4.25 ಲಕ್ಷ (ನಾಲ್ಕು ಲಕ್ಷದ ಇಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಈ ಮೂಲಕ ಕಾರ್ಯಪಾಲಕ ಇಂಜಿನಿಯರ್ ನಂ.2, ಕಟ್ಟಡಗಳ ವಿಭಾಗ, ಲೋಕೋಪಯೋಗಿ ಇಲಾಖೆ ಬೆಂಗಳೂರು ಅವರಿಗೆ ಬಿಡುಗಡೆ ಮಾಡಿದೆ.

ಇದರ ವೆಚ್ಚವನ್ನು 2006-07 ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 4202-04-800-1-02 (ಯೋಜನೇತರ) ಉಪಶೀರ್ಷಿಕೆ 139 ರಡಿಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಒದಗಿಸಲಾದ ಅನುದಾನದಡಿಯಲ್ಲಿ ಭರಿಸತಕ್ಕದ್ದು. ಈ ಆದೇಶವನ್ನು ಅಧಿಕೃತ ಜ್ಞಾಪನ ಸಂಖ್ಯೆ: ಎಫ್‌ಡಿ 3 ಬಿಪಿಇ 2006 ದಿನಾಂಕ: 31-03-2006 ಅನುಸೂಚಿತ ಅಂಕಣ 5 ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಹಾಗೂ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಂತರೀಕ ಆರ್ಥಿಕ ಸಲಹೆಗಾರರ ಸಹಮತಿ ಅನಧಿಕೃತ ಟಿಪ್ಪಣಿ ಸಂಖ್ಯೆ: ಇಡಿ 594 ಐಎಫ್(ಬಿಎ) 2006 ದಿನಾಂಕ: 18-07-2006 ರಂದು ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್.ಶಿವರಾಮ್**

ಪಿ.ಆರ್. 1431

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ,

ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ, (ಆಡಳಿತ ಕನ್ನಡ).

**ವಿಷಯ:** ಶ್ರೀ ಎಂ.ಬಿ.ಮಹದೇವಸ್ವಾಮಿ, ಸಹಾಯಕ ಪತ್ರಪಾಲಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಅವರಿಗೆ 20 ವರ್ಷಗಳ ವೇತನ ಬಡ್ತಿ ಮಂಜೂರು ಮಾಡುವ ಬಗ್ಗೆ

**ಓದಲಾಗಿದೆ:**
1 ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಎಆರ್ಎಸ್ 16 ಇಎಸ್‌ಟಿ 85(ಭಾ) ದಿನಾಂಕ: 11-11-2005
2 ಅಧಿಸೂಚನೆ ಸಂಖ್ಯೆ: ಸಂಕಇ 14 ರಾಪಸಿ 2005 ದಿನಾಂಕ 14-2-2006
3 ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಎಆರ್ಎಸ್ 16 ಇಎಸ್‌ಟಿ 85(ಭಾ) ದಿನಾಂಕ 16-4-2005

**ಪ್ರಸ್ತಾವನೆ:**

ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು ಅವರು ಸಲ್ಲಿಸಿದ ಪ್ರಸ್ತಾವನೆ ಮೇರೆಗೆ ಸಹಾಯಕ ಪತ್ರಪಾಲಕರ ಹುದ್ದೆಯಲ್ಲಿ ಯಾವುದೇ ಮುಂಬಡ್ತಿ ಇಲ್ಲದೆ 20 ವರ್ಷಗಳ ಸತತ ಸೇವೆಯನ್ನು ಸಲ್ಲಿಸಿದ್ದಕ್ಕಾಗಿ ಶ್ರೀ ಎಂ.ಬಿ.ಮಹದೇವಸ್ವಾಮಿ, ಸಹಾಯಕ ಪತ್ರಪಾಲಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು ಅವರಿಗೆ, ಅವರು 20 ವರ್ಷಗಳ ಸೇವೆಯನ್ನು ಪೂರೈಸಿದ ದಿನಾಂಕ 1-3-2005ರಿಂದ ಜಾರಿಗೆ ಬರುವಂತೆ ಹೆಚ್ಚುವರಿ ವೇತನ ಬಡ್ತಿಯನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ 14-2-2006ರ ಅಧಿಸೂಚನೆಯಲ್ಲಿ ಮಂಜೂರು ಮಾಡಲಾಗಿತ್ತು. ಆ ನಂತರ ನಡೆದ ಪರಿಶೀಲನೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 13 ಎಸ್‌ಆರ್‌ಪಿ 2002 ದಿನಾಂಕ 9-5-2002 ರನ್ವಯ ಮೊದಲ 11 ವೇತನ ಶ್ರೇಣಿಗೆ ಈ ಸೌಲಭ್ಯ ಲಭ್ಯವಿದ್ದು ಶ್ರೀ ಎಂ.ಬಿ.ಮಹದೇವಸ್ವಾಮಿ ಅವರು ಇದರ ನಂತರದ 7400-13120 ವೇತನ ಶ್ರೇಣಿಯಲ್ಲಿ ಇದ್ದುದ್ದರ ಕಾರಣ ಅವರು ಸದರಿ ವೇತನ ಮುಂಬಡ್ತಿ ಪಡೆಯಲು ಅರ್ಹತೆ ಹೊಂದಿರುವ ಕಾರಣ ಆರ್ಥಿಕ ಇಲಾಖೆಯೊಡನೆ ಸಮಾಲೋಚಿಸಲಾಯಿತು. ಆರ್ಥಿಕ ಇಲಾಖೆಯು ತನ್ನ ಅಭಿಪ್ರಾಯ ನೀಡಿ ಪ್ರಸ್ತುತ ಪ್ರಕರಣದಲ್ಲಿ ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯ ಸಹಾಯಕ ಪತ್ರಪಾಲಕರ ಹುದ್ದೆಯು ರಾಜ್ಯ ವೇತನ ಶ್ರೇಣಿಗಳಲ್ಲಿನ 11ನೇ ವೇತನ ಶ್ರೇಣಿಯಾದ 6000-11200ರಲ್ಲಿ ಇರುವುದರಿಂದ ಈ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಎಂ.ಬಿ.ಮಹಾದೇವಸ್ವಾಮಿ ಅವರಿಗೆ ಅವರು ಹೊಂದಿರುವ ವೇತನ ಶ್ರೇಣಿ 7400-13120ರಲ್ಲಿ ಒಂದು ಹೆಚ್ಚುವರಿ ವೇತನ ಬಡ್ತಿ ಸೌಲಭ್ಯವನ್ನು ಮಂಜೂರು ಮಾಡಿರುವುದು ನಿಯಮಕ್ಕೆ ಅನುಸಾರವಾಗಿಯೇ ಇದೆ ಎಂದು ಅಭಿಪ್ರಾಯ ಪಟ್ಟಿತು. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 14 ರಾಪಸಿ 2005, ಬೆಂಗಳೂರು ದಿನಾಂಕ 3ನೇ ಅಕ್ಟೋಬರ್ 2006**

ಅಧಿಸೂಚನೆ ಸಂಖ್ಯೆ: ಸಂಕಇ 14 ರಾಪಸಿ 2005 ದಿನಾಂಕ 14-2-2006ನ್ನು ಮಾರ್ಪಡಿಸಿ ಸರ್ಕಾರವು ಶ್ರೀ ಎಂ.ಬಿ.ಮಹಾದೇವಸ್ವಾಮಿ, ಸಹಾಯಕ ಪತ್ರಪಾಲಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು ಅವರು 1-3-1985ರಿಂದ ನಿರಂತರವಾಗಿ 20 ವರ್ಷಗಳ ಸೇವೆಯನ್ನು ಪೂರೈಸಿದ ದಿನಾಂಕ 1-3-2005ರಿಂದ ಅನ್ವಯವಾಗುವಂತೆ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 13 ಎಸ್‌ಆರ್‌ಪಿ 2002 ದಿನಾಂಕ 9-5-2002 ಅನ್ವಯ ಅವರ ವೇತನ ಶ್ರೇಣಿ 7400-200-8800-260-10880-320-13120ರಲ್ಲಿ 260 ರೂಪಾಯಿಗಳ ದರದಲ್ಲಿ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು ಮಂಜೂರು ಮಾಡುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 982 ವೆಚ್ಚ-5: 2006 ದಿನಾಂಕ: 24-8-2005 ಸಹಮತಿ ಪಡೆದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್.ಶಿವರಾಮ್**

ಪಿ.ಆರ್. 1465

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ, (ಆಡಳಿತ ಕನ್ನಡ).

**ತಿದ್ದೋಲೆ**

**ಸಂಖ್ಯೆ: ಸಂಕಇ 17 ರಾಪಸಿ 2006, ಬೆಂಗಳೂರು, ದಿನಾಂಕ: 5ನೇ ಅಕ್ಟೋಬರ್ 2006**

ಸರ್ಕಾರಿ ಆದೇಶ ಸಂಖ್ಯೆ: ಸಂಕಇ 6 ರಾಪಸಿ 2006 ದಿನಾಂಕ 26-5-2006ರ ಆದೇಶದ ಭಾಗವನ್ನು ದಿನಾಂಕ 26-5-2006ರಿಂದಲೇ ಜಾರಿಗೆ ಬರುವಂತೆ ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

ಶ್ರೀಮತಿ ಉಷಾ ಸುರೇಶ್, ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಅವರು ದಿನಾಂಕ 1-2-2005ರಿಂದ 14-3-2006ರವರೆಗೆ ನಿರ್ದೇಶಕರ ಹುದ್ದೆಯಲ್ಲಿ ಸ್ವತಂತ್ರ ಪ್ರಭಾರದಲ್ಲಿ ಕಾರ್ಯನಿರ್ವಹಿಸಿದ್ದಕ್ಕಾಗಿ ಅವರಿಗೆ ಕೆ.ಸಿ.ಎಸ್.ಆರ್ಸ್. ನಿಯಮ 68ರನ್ವಯ ನಿರ್ದೇಶಕರ ಹುದ್ದೆಯ ವೇತನ ಶ್ರೇಣಿ 10620-14960 ಆಗಿದ್ದು ಆ ಹುದ್ದೆಯ ಕನಿಷ್ಟ ತಮ್ಮ ವೇತನದ ಶೇಕಡ 5ರಷ್ಟು ಮೊತ್ತವನ್ನು ಪ್ರಭಾರಭತ್ಯೆಯನ್ನಾಗಿ ಈ ಮೂಲಕ ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್.ಶಿವರಾಮ್**

ಪಿ.ಆರ್. 1467

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ, (ಆಡಳಿತ ಕನ್ನಡ).

**ವಿಷಯ:** ಪತ್ರಾಗಾರ ದಾಖಲೆಗಳ ಸಂರಕ್ಷಣೆ–ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಮೊತ್ತಕ್ಕೆ ರಾಜ್ಯ ಸರ್ಕಾರದ ಮ್ಯಾಚಿಂಗ್ ಗ್ರಾಂಟ್ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1 ಪತ್ರ ಸಂಖ್ಯೆ:ಎಫ್.ನಂ.31–2(40)2005–ಗ್ರಾಂಟ್ಸ್ ದಿನಾಂಕ: 19–05–2006 ಸಹಾಯಕ ನಿರ್ದೇಶಕರು ಭಾರತ ರಾಷ್ಟ್ರೀಯ ಪತ್ರಾಗಾರ, ಭಾರತ ಸರ್ಕಾರ ನವದೆಹಲಿ
2 ಸರ್ಕಾರದ ಪತ್ರ ಸಂಖ್ಯೆ: ಎಸ್‌ಕೆಡಿ 21 ರಾಪಸ 2006 ದಿನಾಂಕ:26–07–2006
3 ನಿರ್ದೇಶಕರು ರಾಷ್ಟ್ರೀಯ ಪತ್ರಾಗಾರ, ಭಾರತ ಸರ್ಕಾರ ನವದೆಹಲಿ ರವರ ಪತ್ರ ಸಂಖ್ಯೆ: ಎಫ್.ನಂ.31–2(40)2005–ಗ್ರಾಂಟ್ಸ್ ದಿನಾಂಕ: 11–08–2006
4 ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆ ರವರ ಪತ್ರ ಸಂಖ್ಯೆ:ಎ.ಆರ್.ಎಸ್. 20 ಎನ್.ಎ.ಐ. 2006 ದಿನಾಂಕ:8–9–2006.

**ಪ್ರಸ್ತಾವನೆ:**

ಭಾರತ ಸರ್ಕಾರವು ಮೇಲೆ(1)ರಲ್ಲಿ ಓದಲಾದ ದಿನಾಂಕ:19–5–2006ರ ಪತ್ರದಲ್ಲಿ ಪತ್ರಾಗಾರ ದಾಖಲೆಗಳ ಸಂರಕ್ಷಣೆಗೆ 2005–06ನೇ ಸಾಲಿನಲ್ಲಿ ಮಂಜೂರಾದ ರೂ.6.75 ಲಕ್ಷಗಳನ್ನು 2006–07 ನೇ ಸಾಲಿನಲ್ಲಿ ಬಿಡುಗಡೆ ಮಾಡಲು ಉದ್ದೇಶಿಸಿದ್ದು, ಒಟ್ಟು ಹಣದ ಶೇಕಡ 25 ರಷ್ಟನ್ನು ಮ್ಯಾಚಿಂಗ್ ಗ್ರಾಂಟ್ ಆಗಿ ಬಿಡುಗಡೆ ಮಾಡಲು ಒಪ್ಪಿಗೆ ತಿಳಿಸುವಂತೆ ಕೋರಿದ್ದರು. ಅದರಂತೆ ಮೇಲೆ (2) ರಲ್ಲಿ ಓದಲಾದ ದಿನಾಂಕ:26–7–2006ರ ಪತ್ರದಲ್ಲಿ ಒಪ್ಪಿಗೆಯನ್ನು ತಿಳಿಸಲಾಯಿತು. ಅದರಂತೆ ಕೇಂದ್ರ ಸರ್ಕಾರವು ಮೇಲೆ(3) ರಲ್ಲಿ ಓದಲಾದ ದಿನಾಂಕ:11–8–2006ರ ಪತ್ರದಲ್ಲಿ ತನ್ನ ಪಾಲಿನ ರೂ.6.75 ಲಕ್ಷಗಳನ್ನು ಬಿಡುಗಡೆ ಮಾಡಿದೆ. ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಅವರು ಮೇಲೆ (4) ರಲ್ಲಿ ಓದಲಾದ ದಿನಾಂಕ:8–9–2006 ರ ಪತ್ರದಲ್ಲಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ರೂ.6.75 ಲಕ್ಷಗಳಿಗೆ ಪೂರಕವಾಗಿ ಯೋಜನೆಯ ಶೇಕಡ 25 ಭಾಗವಾದ ರೂ.2.25 ಲಕ್ಷಗಳನ್ನು ರಾಜ್ಯ ಸರ್ಕಾರದ ವತಿಯಿಂದ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 21 ರಾಪಸ 2006, ಬೆಂಗಳೂರು, ದಿನಾಂಕ :11ನೇ ಅಕ್ಟೋಬರ್ 2006**

ಪತ್ರಾಗಾರ ದಾಖಲೆಗಳ ಸಂರಕ್ಷಣೆಗಾಗಿ ಕೇಂದ್ರ ಸರ್ಕಾರದಿಂದ ಬಿಡುಗಡೆ ಆದ ರೂ.6.75 ಲಕ್ಷಗಳಿಗೆ ಪೂರಕವಾಗಿ ಯೋಜನೆಯ ಶೇಕಡ 25 ಭಾಗ ರೂ.2.25 (ಎರಡು ಲಕ್ಷದ ಇಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ) ಲಕ್ಷಗಳನ್ನು ರಾಜ್ಯ ಸರ್ಕಾರವು ಈ ಮೂಲಕ ಬಿಡುಗಡೆ ಮಾಡುತ್ತದೆ. ಈ ಬಗೆಗಿನ ವೆಚ್ಚವನ್ನು 2006–07ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ: 2205–00–104–0–01–051 ಸಾಮಾನ್ಯ ವೆಚ್ಚಗಳು (ಯೋಜನೇತರ) ಇದರಲ್ಲಿ ಭರಿಸಬಹುದು.

ಇದನ್ನು ವೆಚ್ಚ ಮಾಡುವಾಗ ಕೇಂದ್ರ ಸರ್ಕಾರವು ದಿನಾಂಕ:11–08–2006ರ ಪತ್ರದಲ್ಲಿ ವಿಧಿಸಿರುವ ಎಲ್ಲಾ ಷರತ್ತುಗಳನ್ನು ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆ ಅವರು ಪೂರೈಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಸ್.ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ, (ಆಡಳಿತ ಕನ್ನಡ).

ಪಿ.ಆರ್. 1486

**ವಿಷಯ:** ಶ್ರೀ.ಬಿ.ಎಂ.ಇದಿನಬ್ಬ, ಮಾಜಿ ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು – ಇವರ ವೈದ್ಯಕೀಯ ವೆಚ್ಚ ಮರು ಪಾವತಿ ಮಾಡುವ ಬಗ್ಗೆ.

**ಓದಲಾಗಿದೆ:**
1 ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ವಿಧಾನಸೌಧ, ಬೆಂಗಳೂರು, ಇವರ ಪತ್ರ ಸಂ. ಕಅಪ್ರಾ/ಕಾ/7/2005–06, ದಿನಾಂಕ: 30.05.2006.
2 ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು–2 ರವರ ಪತ್ರ ಸಂಖ್ಯೆ: ಎಂ.ಡಿ.ಎ.ಎನ್.ಡಿ.1026/2005–06, ದಿನಾಂಕ: 30.06.2006.

**ಪ್ರಸ್ತಾವನೆ:**

ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಕಾರ್ಯದರ್ಶಿ ಬೆಂಗಳೂರು ಇವರು ಮೇಲೆ (1) ರಲ್ಲಿ ಓದಲಾದ ದಿನಾಂಕ: 30–05–2006ರ ಪತ್ರದಲ್ಲಿ ಶ್ರೀ ಬಿ.ಎಂ.ಇದಿನಬ್ಬ ಮಾಜಿ ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ ವಿಧಾನಸೌಧ ಬೆಂಗಳೂರು, ಇವರ ಹೃದಯ ಕಾಯಿಲೆ ಸಂಬಂಧ ಸೆಪ್ಟೆಂಬರ್ ಮಾಹೆ 2005 ರಲ್ಲಿ ಬೆಂಗಳೂರಿನ ಎಂ.ಎಸ್.ರಾಮಯ್ಯ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದ ಸಂಬಂಧ ರೂ.67,560–00 ವೈದ್ಯಕೀಯ ವೆಚ್ಚವನ್ನು ಮರುಪಾವತಿಸಲು ಕೋರಿ ಪ್ರಸ್ತಾವನೆ ಸಲ್ಲಿಸಿದ್ದಾರೆ. ಇದನ್ನು ಪರಿಶೀಲಿಸಿದ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ ಅವರು ಮೇಲೆ (2) ರಲ್ಲಿ ಓದಲಾದ ದಿನಾಂಕ:30–06–2006ರ ಪತ್ರದಲ್ಲಿ ರೂ.53,980–00 ಗಳನ್ನು ಮರುಪಾವತಿಸಲು ಶಿಫಾರಸ್ಸು ಮಾಡಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂ. ಸಂಕಇ 7 ಕೆಓಎಲ್ 2006, ಬೆಂಗಳೂರು, ದಿನಾಂಕ: 11ನೇ ಅಕ್ಟೋಬರ್ 2006.**

ಕರ್ನಾಟಕ ಸಚಿವರ ವೈದ್ಯಕೀಯ (ವೈದ್ಯೋಪಚಾರ) ನಿಯಮಾವಳಿ 1958ರ ನಿಯಮ 10ನ್ನು ಸಡಿಲಿಸಿ ಸರ್ಕಾರವು ಶ್ರೀ ಬಿ.ಎಂ.ಇದಿನಬ್ಬ ಮಾಜಿ ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಇವರು ಹೃದಯ ಸಂಬಂಧಿ ಕಾಯಿಲೆಗಾಗಿ ಬೆಂಗಳೂರಿನ ಎಂ.ಎಸ್.ರಾಮಯ್ಯ ಆಸ್ಪತ್ರೆಯಲ್ಲಿ ಪಡೆದ ವೈದ್ಯಕೀಯ ಚಿಕಿತ್ಸೆ ಸಂಬಂಧ ರೂ.53,980–00 (ಐವತ್ತಮೂರು

ಸಾವಿರದ ಒಂಭೈನೂರ ಎಂಭತ್ತು ರೂಪಾಯಿಗಳು ಮಾತ್ರ)ಗಳನ್ನು ವೈದ್ಯಕೀಯ ವೆಚ್ಚವನ್ನಾಗಿ ಮರುಪಾವತಿಸಲು ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ವೆಚ್ಚ–5)ಯ ಟಿಪ್ಪಣಿ ಸಂಖ್ಯೆ: ಆಇ 1408 ವೆಚ್ಚ 5/2006 ದಿನಾಂಕ: 11.09.2006 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್.ಶಿವರಾಮ್**

ಪಿ.ಆರ್. 1487

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ, (ಆಡಳಿತ ಕನ್ನಡ).

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಪ್ರಾಣೇಶ ರೊಟ್ಟಿ, ಪಿಎಸ್ಐ., ರಾಯಚೂರು ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ.

**ಓದಲಾಗಿದೆ:**

1 ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ರಾಯಚೂರು ಇವರ ಆದೇಶ ಸಂಖ್ಯೆ:ಸಿಬ್ಬಂದಿ/3/ ಶಿಕ್ಷೆ-24/2003 ಆಪು ಸಂಖ್ಯೆ:192/03, ದಿನಾಂಕ:17-05-2003.

2 ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ:ಅಪೀಲು/81/ಈವ/2003, ದಿನಾಂಕ:11-12-2003.

3 ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:04-03-2005

4 ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/ 2/36/2005, ದಿನಾಂಕ:28-06-2005.

5 ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ/52/ CNS/06, ದಿನಾಂಕ:01-07-2006.

**ಪ್ರಸ್ತಾವನೆ:**

ಶ್ರೀ ಪ್ರಾಣೇಶ್‌ರೊಟ್ಟಿ, ಪಿಎಸ್ಐ ನೇತಾಜಿನಗರ ಪೊಲೀಸ್ ಠಾಣೆ, ರಾಯಚೂರು ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 7ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷರೋಪಣೆ:**

1. "ಶ್ರೀ ಪ್ರಾಣೇಶ್‌ರೊಟ್ಟಿ, ಪಿಎಸ್ಐ (ಕಾ ಸು) ನೇತಾಜಿನಗರ ಠಾಣೆ ರವರೇ ಈ ಜಿಲ್ಲೆಯಲ್ಲಿ ಮಟಕಾ ಮತ್ತು ಜೂಜಾಟಗಳನ್ನು ಸಂಪೂರ್ಣವಾಗಿ ತಡೆಗಟ್ಟುವ ಸಲುವಾಗಿ, ಜಿಲ್ಲೆಯ ಎಲ್ಲಾ ಪೊಲೀಸ್ ಅಧಿಕಾರಿಗಳು ಈ ಬಗ್ಗೆ ಕಟ್ಟುನಿಟ್ಟಿನ ಕ್ರಮ ಕೈಗೊಂಡು ನಿಮ್ಮ ನಿಮ್ಮ ಠಾಣೆಯ ಸರಹದ್ದಿನಲ್ಲಿ ಮಟಕಾ ಮತ್ತು ಜೂಜಾಟ ಸಂಪೂರ್ಣ ನಿಯಂತ್ರಿಸುವಂತೆ ಈ ಕಚೇರಿ ಜ್ಞಾಪನಾ ಸಂಖ್ಯೆ:ಸಿಬಿ/ಎಸ್‌ಸಿಎಂ/2000, ದಿನಾಂಕ:17-04-2000ರ ಮೂಲಕ ಲಿಖಿತವಾಗಿ ತಿಳಿಸಿದ್ದು, ನಂತರ ಈ ಬಗ್ಗೆ ನಾನು ದಿನಾಂಕ:05-05-2002, 01-07-2002, 11-08-2002 ರಂದು ಜರುಗಿದ ಮಾಸಿಕ ಅಪರಾಧ ಸಂಕೀರ್ಣ ಸಭೆಯಲ್ಲಿ ಸಹ ಮಟಕಾ ಜೂಜಾಟವನ್ನು ಸಂಪೂರ್ಣವಾಗಿ ನಿರ್ಮೂಲನೆ ಮಾಡುವಂತೆ ಸ್ಪಷ್ಟವಾಗಿ ಆದೇಶಿಸಲಾಗಿತ್ತು. ಅಲ್ಲದೇ, ಈ ಹಿಂದೆ ಹೆಚ್ಚುವರಿ ಜಿಲ್ಲಾ ಪೊಲೀಸ್ ಅಧಿಕಾರಿಗಳು ತಮ್ಮ ಪತ್ರ ಸಂಖ್ಯೆ:ಅಪರ/ಮಟಕಾ/ಜೂಜಾಟ/2000, ದಿನಾಂಕ:14-06-2000 ರಲ್ಲಿಯೂ ಸಹ ಮಟಕಾ ಜೂಜಾಟವನ್ನು ತಡೆಗಟ್ಟುವಂತೆ ಸೂಚಿಸುವುದಲ್ಲದೇ ಡಿಎಸ್‌ಪಿ ರಾಯಚೂರು ರವರು ತಮ್ಮ ಜ್ಞಾಪನಾ ಪತ್ರ ಸಂಖ್ಯೆ:1/ರಾಉವಿ/ಮಟಕ/1, ದಿನಾಂಕ:25-04-2001 ಮತ್ತು ಸಂ.1378/2001, ದಿನಾಂಕ:21-09-2001 ಹಾಗೂ ಸಂ.711/2002, ದಿನಾಂಕ:11-05-2002ರಲ್ಲಿ ನಿಮ್ಮ ಠಾಣೆಯ ಹದ್ದಿನಲ್ಲಿ ಮಟಕಾ ಜೂಜಾಟಗಳು ರಾಜಾರೋಷವಾಗಿ ನಡೆಯುತ್ತಿದ್ದು, ಈ ಬಗ್ಗೆ ಸೂಕ್ತ ಕ್ರಮ ಜರುಗಿಸಿ, ವರದಿ ಸಲ್ಲಿಸುವಂತೆ ಮೇಲ್ಕಂಡ ಜ್ಞಾಪನಗಳ ಮೂಲಕ ಸೂಚಿಸಿದ್ದಾಗ್ಯೂ ಸಹ ನೀವು ನಿಮ್ಮ ಠಾಣಾ ವ್ಯಾಪ್ತಿಯಲ್ಲೂ ಮಟಕ ಜೂಜಾಟಗಳನ್ನು ತಡೆಗಟ್ಟುವಲ್ಲಿ ವಿಫಲರಾಗಿರುವುದು DSP ರಾಯಚೂರು ರವರ ವರದಿಯಿಂದ ಕಂಡುಬರುತ್ತದೆ."

2. " ದಿನಾಂಕ:10-02-2003ರಂದು ಖಚಿತವಾದ ಬಾತ್ಮಿ ಮೇರೆಗೆ PI DCIB ಮತ್ತು ಸಿಬ್ಬಂದಿ ಹಾಗೂ ಪಂಚರೊಂದಿಗೆ ಮಟಕಾ, ಜೂಜಾಟ ನಡೆಯುತ್ತಿರುವ ಅಡ್ಡೆಯ ಮೇಲೆ ದಾಳಿ ಮಾಡಿ, ಸದರ ಬಜಾರ ಠಾಣೆಯಲ್ಲಿ ಗುನ್ನೆ ಸಂ.27/2003 ಕಲಂ 20(1)(ಬಿ) SDPS ಆಕ್ಟ್ 1994 ಮತ್ತು 78 (2) ಕೆಪಿ ಆಕ್ಟ್ ಅಡಿಯಲ್ಲಿ ಪ್ರಕರಣ ದಾಖಲಿಸಿದ್ದು ಇರುತ್ತದೆ."

3. "ಬಸವರಾಜ ತಂದೆ ಚಂದ್ರಕಾಂತ ಮೇನೆ ಬುಕ್ಕಿ ಗುನ್ನೆ ಸಂ.9/03 ಕಲಂ 78(3) ಕೆ.ಪಿ.ಆಕ್ಟ್ ಅಡಿಯಲ್ಲಿ ಪ್ರಕರಣ ದಾಖಲಾದ ನಂತರ ಬಂಧನ ಮಾಡಿ ನ್ಯಾಯಾಂಗ ಬಂಧನಕ್ಕೆ ಕಳಿಸಿದ್ದರೆ, ಪುನ: ಮಟಕಾ ಜೂಜಾಟದಲ್ಲಿ ತೊಡಗುವ ಸಾಧ್ಯತೆಗಳು ಇರುತ್ತಿರಲಿಲ್ಲ ಮತ್ತು ನೀವು ಒಬ್ಬ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿದ್ದು, ಪರಾರಿ ಇರುವ ಆರೋಪಿಯನ್ನು ಪತ್ತೆ ಮಾಡಿ, ನ್ಯಾಯಾಂಗ ಬಂಧನಕ್ಕೆ ಕಳಿಸುವುದು ನಿಮ್ಮ ಆದ್ಯ ಕರ್ತವ್ಯವಾಗಿರುತ್ತದೆ. ಆದರೆ ನೀವು ಬಂಧನ ಮಾಡಿರುವ ಇಬ್ಬರು ಆರೋಪಿತರನ್ನು ಜಾಮೀನಿನ ಮೇಲೆ ಬಿಟ್ಟು, ಮಟಕಾ, ಜೂಜಾಟ, ಬುಕ್ಕಿ ಬಸವರಾಜನನ್ನು ಬಂಧನ ಮಾಡುವಲ್ಲಿ ವಿಫಲರಾಗಿ ಕರ್ತವ್ಯದಲ್ಲಿ ಘೋರ

ಅಲಕ್ಷತನ ಹಾಗೂ ಬೇಜವಾಬ್ದಾರಿತನ ವ್ಯಕ್ತಪಡಿಸಿರುವುದಲ್ಲದೆ, ಮೇಲಾಧಿಕಾರಿಗಳ ಸಲಹೆ ಸೂಚನೆಗಳನ್ನು ಪಾಲಿಸುವಲ್ಲಿಯೂ ಸಹ ವಿಫಲರಾಗಿರುವುದಾಗಿ ಆರೋಪಿಸಲಾಗಿತ್ತು.''

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ರಾಯಚೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:17-05-2003ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಮುಂಬಡ್ತಿಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗದಂತೆ ಮೂರು ವರ್ಷಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:11-12-2003ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ತಮ್ಮ ಠಾಣಾ ವ್ಯಾಪ್ತಿಯಲ್ಲಿ ನಡೆಯುತ್ತಿರುವ ಮಟ್ಕಾ ಜೂಜಾಟ ದಂಧೆಗಳನ್ನು ನಿಯಮಗಳ ಅಡಿ ಗುನ್ನೆಗಳನ್ನು ದಾಖಲಿಸಿದ್ದರೂ, ಅವುಗಳನ್ನು ತಡೆಯದೇ ಗುನ್ನೆಗಳನ್ನು ದಾಖಲಿಸುವುದೇ ದೊಡ್ಡ ಸಾಧನೆ ಎಂದು ವಾದಿಸಿರುವುದು ಸರಿಯಲ್ಲ ಆದರೂ, ಅರ್ಜಿದಾರರು 1980ರಲ್ಲಿ ಕರ್ತವ್ಯಕ್ಕೆ ಸೇರಿದ್ದು 2001ರಲ್ಲಿ ಪಿ.ಎಸ್.ಐ., ಆಗಿ ನೇಮಕಗೊಂಡಿದ್ದು ಈ ಸೇವಾ ಅವಧಿಯಲ್ಲಿ ಯಾವುದೇ ರೀತಿಯ ಶಿಕ್ಷೆ ಪಡೆದಿರುವುದಿಲ್ಲ ಇವರ ಉತ್ತಮ ಸೇವೆಗೆ 1) ಜಿ.ಎಸ್.ಐ., 2) ಪ್ರಶಂಸನೀಯ ಪತ್ರ, 3) ಬಹುಮಾನಗಳನ್ನು ಸಹ ಪಡೆದಿರುತ್ತಾರೆ.

ದಿನಾಂಕ:20-11-2003ರ ಆದೇಶದ ಪ್ರತಿಗಳಲ್ಲಿ ಶ್ರೀ ಅನೀಲ್‌ಕುಮಾರ್, ಪಿಎಸ್ಐ, ಸದರ ಬಜಾರ್ ಪೊಲೀಸ್ ಠಾಣೆ, ರವರು ಮಟ್ಕಾ ಜೂಜಾಟ ತಡೆಗಟ್ಟುವಲ್ಲಿ ವಿಫಲರಾಗಿರುವ ಆರೋಪಣೆಗೆ ಒಳಗೊಂಡಿದ್ದು, ಇವರಿಗೆ ಛೀಮಾರಿ ಹಾಕುವ ಶಿಕ್ಷೆಯನ್ನು ವಿಧಿಸಿರುತ್ತಾರೆ. ಪ್ರಸ್ತುತ ಪ್ರಕರಣದಲ್ಲೂ ಸಹ ಅದೇ ಪೊಲೀಸ್ ಠಾಣೆ ವ್ಯಾಪ್ತಿಯಲ್ಲಿ ಮಟ್ಕಾ ಜೂಜಾಟವನ್ನು ತಡೆಯುವಲ್ಲಿ ಮುತುವರ್ಜಿ ವಹಿಸಿಲ್ಲವೆಂದು ಅರ್ಜಿದಾರರಿಗೆ 3 ವಾರ್ಷಿಕ ವೇತನ ಬಡ್ತಿಯನ್ನು 3 ವರ್ಷಗಳ ಕಾಲ ಮುಂದೂಡಿ ಶಿಕ್ಷೆ ವಿಧಿಸಲಾಗಿದೆ. ಮೇಲಿನ ಸನ್ನಿವೇಶದಲ್ಲಿ ಶ್ರೀ ಪ್ರಾಣೇಶ್ ರೊಟ್ಟಿ ರವರ ಮೇಲ್ಮನವಿಯನ್ನು ಪುರಸ್ಕರಿಸಿ ಇವರಿಗೆ ನೀಡಿರುವ ದಂಡನೆಯನ್ನು ರದ್ದುಪಡಿಸಿ, ಶ್ರೀ ಅನೀಲ್‌ಕುಮಾರ್, ರವರಿಗೆ ನೀಡಿರುವಂತೆ ಛೀಮಾರಿ ಹಾಕುವ ದಂಡನೆಯನ್ನು ನೀಡಿ, ಶಿಸ್ತು ಪ್ರಾಧಿಕಾರಿಯ ದಂಡನಾದೇಶವನ್ನು ಮಾರ್ಪಡಿಸಿ, `ಛೀಮಾರಿ` ದಂಡನೆ ವಿಧಿಸಲು ಸರ್ಕಾರ ಉದ್ದೇಶಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಅನುಮೋದನೆ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ:01-07-2006ರ ಪತ್ರದಲ್ಲಿ ಸರ್ಕಾರ ಉದ್ದೇಶಿಸಿದ ಮಾರ್ಪಾಡಿಗೆ ತನ್ನ ಸಹಮತಿ ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 82 ಪೊಸಿಅ 2005 ಬೆಂಗಳೂರು, ದಿನಾಂಕ:18ನೇ ಸೆಪ್ಟೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ:17-05-2003ರ ಶಿಸ್ತು ಪ್ರಾಧಿಕಾರಿಯ ದಂಡನಾದೇಶವನ್ನು ರದ್ದುಪಡಿಸಿದೆ. ಶ್ರೀ ಪ್ರಾಣೇಶ್ ರೊಟ್ಟಿ ಪಿಎಸ್ಐ ರಾಯಚೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:04-03-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆಗೊಳಿಸಿ ಸಕ್ರಮಗೊಳಿಸಿದೆ. ಇನ್ನು ಮುಂದೆ ಎಚ್ಚರಿಕೆಯಿಂದ ಇರಲು ಒಂದು ಅವಕಾಶ ನೀಡಿ `ಛೀಮಾರಿ` ಹಾಕಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ:01-07-2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 1474

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಕೆ.ಕೆ.ಕುಟ್ಟಪ್ಪ, ಎಹೆಚ್‌ಸಿ-86, 1ನೇ ಪಡೆ, ಕೆಎಸ್‌ಆರ್‌ಪಿ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿ.

**ಓದಲಾಗಿದೆ:**

1 ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 1ನೇ ಪಡೆ, ಕೆಎಸ್‌ಆರ್‌ಪಿ, ಬೆಂಗಳೂರು, ಇವರ ಆದೇಶ ಸಂಖ್ಯೆ:ಇಎಸ್‌ಟಿ/2/ಪನ್ಸಿ/2/90-91, ದಿನಾಂಕ:10-06-1991.

2 ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆಎಸ್‌ಆರ್‌ಪಿ, ಪೂರ್ವ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ:50/ಡಿಇ/91-92 ಓಬಿ ಸಂಖ್ಯೆ:270/91-92, ದಿನಾಂಕ:09-12-1991.

3 ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:23-07--2004.

4 ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/51/2004, ದಿನಾಂಕ:20-04-2005.

5 ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:PSC/158/ CNS/2005, ದಿನಾಂಕ: 24.07.2006.

ಪ್ರಸ್ತಾವನೆ:

ಶ್ರೀ ಕೆ.ಕೆ.ಕುಟ್ಟಪ್ಪ, ಹವಲ್ದಾರ್ ಚಾಲಕ (AHC-86) ಪ್ರಸ್ತುತ ARSI 7ನೇ ಪಡೆ, ಮಂಗಳೂರು, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ದಿನಾಂಕ:07-04-1990 ರಂದು ಡಿಜಿ ಮತ್ತು ಐಜಿಪಿ, ಕರ್ನಾಟಕ ರಾಜ್ಯ ಇವರ ಎಸ್ಕಾರ್ಟ್ ಡ್ಯೂಟಿಗೆ 1ನೇ ಪಡೆಯ ತುಕಡಿಯನ್ನು ವಾಹನದಲ್ಲಿ ಕರೆದುಕೊಂಡು ಹವಲ್ದಾರ್ ಚಾಲಕ 86, ಕೆ.ಕೆ.ಕುಟ್ಟಪ್ಪ, ವಾಹನ ವಿಭಾಗ, 1ನೇ ಪಡೆ, ಕೆಎಸ್‌ಆರ್‌ಪಿ, ಬೆಂಗಳೂರು ಆದ ನಿಮ್ಮನ್ನು ಡಿಜಿ ಮತ್ತು ಐಜಿಪಿ ರವರ ಕಚೇರಿಗೆ ಸದರಿ ದಿನದಂದು ವಾಹನದ ಜೊತೆಯಲ್ಲಿ ಮುಂಜಾನೆ 05-00 ಗಂಟೆಗೆ ವರದಿ ಮಾಡಲು ನೇಮಿಸಲಾಗಿತ್ತು. ಆದರೆ, ನೀವು ಆ ದಿವಸ ಡಿಜಿ ಮತ್ತು ಐಜಿಪಿ ರವರ ಕಚೇರಿಗೆ 05-25 ಗಂಟೆಗೆ ತಡವಾಗಿ ಹೋಗಿ ವರದಿ ಮಾಡಿರುತ್ತೀರಿ. ನೀವು ಉನ್ನತ ಅಧಿಕಾರಿಗಳ ಆದೇಶವನ್ನು ನಿರ್ಲಕ್ಷಿಸಿದ್ದರಿಂದ ಎಸ್ಕಾರ್ಟ್ ತುಕಡಿಯು 05-00 ಗಂಟೆಗೆ ಬದಲಾಗಿ 05-25ಕ್ಕೆ ತಲುಪಿದ್ದರಿಂದ, ವರಿಷ್ಠ ಅಧಿಕಾರಿಗಳ ಕರ್ತವ್ಯದಲ್ಲಿ ಉಂಟಾದ ವಿಳಂಬಕ್ಕೆ ನೀವೇ ಕಾರಣರಾಗಿರುತ್ತೀರಿ. ಶಿಸ್ತಿನ ಅತ್ಯವಶ್ಯಕ ಸೇವೆಯ ಇಲಾಖೆಯಲ್ಲಿ ಕೆಲಸನಿರ್ವಹಿಸುತ್ತಿರುವ ನೀವು ವರಿಷ್ಠ ಅಧಿಕಾರಿಗಳ ಆದೇಶವನ್ನು ಉಲ್ಲಂಘಿಸಿ, ತಡವಾಗಿ ಹೋಗಿ ನಿಮ್ಮ ಕರ್ತವ್ಯದಲ್ಲಿ ಅಶಿಸ್ತು, ಬೇಜವಾಬ್ದಾರಿತನ ಹಾಗೂ ಹೊಣೆಗೇಡಿತನವನ್ನು ತೋರಿಸಿ, ಕರ್ತವ್ಯಲೋಪವೆಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿಲ್ಲವೆಂದೂ ಸತ್ಯಕ್ಕೆ ದೂರವಾಗಿದೆ ಎಂದೂ ಸಲ್ಲಿಸಿದ ವರದಿಯನ್ನು ಒಪ್ಪದ ಶಿಸ್ತು ಪ್ರಾಧಿಕಾರಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 1ನೇ ಪಡೆ, ಕೆಎಸ್‌ಆರ್‌ಪಿ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:10-06-1991ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಅಡಚಣೆ ಇಲ್ಲದಂತೆ ಒಂದು ವರ್ಷಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆಎಸ್‌ಆರ್‌ಪಿ, ಪೂರ್ವ ವಲಯ, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:09-12-1991ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶಿಸ್ತು ಪ್ರಾಧಿಕಾರಿಯ ದಿನಾಂಕ:10-06-1991ರ ಆದೇಶದಲ್ಲಿ ಅರ್ಜಿದಾರರ ಮೇಲಿನ ಆರೋಪ ಸಾಬೀತಾಗಿಲ್ಲದಿದ್ದರೂ, ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆ ಆಗದಂತೆ ಒಂದು ವರ್ಷದ ಅವಧಿಗೆ ಮುಂದೂಡಿದ ಶಿಕ್ಷೆ ವಿಧಿಸಲಾಗಿದ್ದು, ಅರ್ಜಿದಾರರು ತಮ್ಮ 33 ವರ್ಷಗಳ ಸೇವಾ ಅವಧಿಯಲ್ಲಿ ಯಾವುದೇ ಗುರುತರ ಆರೋಪಗಳಿಗೆ ಗುರಿಯಾಗಿಲ್ಲದ ಕಾರಣ ಹಾಗೂ ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿಲ್ಲ ಎನ್ನುವ ವರದಿಯನ್ನು ಸಲ್ಲಿಸಿರುವ ಹಿನ್ನೆಲೆಯಲ್ಲಿ ಅರ್ಜಿದಾರರನ್ನು ದೋಷಮುಕ್ತಗೊಳಿಸಲು ಸರ್ಕಾರ ಉದ್ದೇಶಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಅನುಮೋದನೆ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ:24-07-2006ರ ತನ್ನ ಪತ್ರದಲ್ಲಿ ಸರ್ಕಾರ ಉದ್ದೇಶಿಸಿದ ಮಾರ್ಪಾಡಿಗೆ ತನ್ನ ಸಹಮತಿ ನೀಡಿದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶವನ್ನು ರದ್ದುಪಡಿಸಲು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 160 ಪೊಸಿಅ 2004 ಬೆಂಗಳೂರು, ದಿನಾಂಕ: 13ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ:10-06-1991ರ ಶಿಸ್ತು ಪ್ರಾಧಿಕಾರಿಯ ಆದೇಶವನ್ನು ರದ್ದುಪಡಿಸಿ, ಶ್ರೀ ಕೆ.ಕೆ.ಕುಟ್ಟಪ್ಪ, ಎಆರ್‌ಎಸ್‌ಐ, 1ನೇ ಪಡೆ, ಕೆಎಸ್‌ಆರ್‌ಪಿ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ: 23.07.2004ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, ಅವರ ವಾರ್ಷಿಕ ವೇತನ ಬಡ್ತಿಗಳನ್ನು ಸಕ್ರಮಗೊಳಿಸಿ, ಬಿಡುಗಡೆ ಮಾಡಲು ಹಾಗೂ ಅಮಾನತ್ತಿನ ಅವಧಿಯನ್ನು `ಕರ್ತವ್ಯದ ಮೇಲೆ` ಎಂದು ಪರಿಗಣಿಸಿ ಅವರ ಹಕ್ಕಿನಲ್ಲಿರುವ ರಜೆಯನ್ನು ಮಂಜೂರು ಮಾಡಲು ಆದೇಶಿಸಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:PSC/158/CNS/2005, ದಿನಾಂಕ: 24.07.2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 1493

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ಶಿಕ್ಷಣ ಸಚಿವಾಲಯ

**ವಿಷಯ:–** ಸಂಯುಕ್ತ ಪದವಿ ಪೂರ್ವ ಕಾಲೇಜುಗಳ ಪ್ರಾಂಶುಪಾಲರು / ಉಪ ಪ್ರಾಂಶುಪಾಲರುಗಳ ಕಾರ್ಯ ಹಂಚಿಕೆ ಬಗ್ಗೆ.

**ಓದಲಾಗಿದೆ:–**
1. ಸರ್ಕಾರದ ಆದೇಶ ಸಂಖ್ಯೆ:ಇಡಿ 433 ಡಿಪಿಐ 2001, ದಿನಾಂಕ:09/01/2003
2. ಸರ್ಕಾರದ ಆದೇಶ ಸಂಖ್ಯೆ:ಇಡಿ 57 ಎಸ್‌ಎಲ್‌ಬಿ 2004, ದಿನಾಂಕ:03/12/2004
3. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರ ಪ್ರಸ್ತಾವನೆ ಸಂಖ್ಯೆ:ಸಿ4(3) ಸೇನಿ–35/2003–04, ದಿನಾಂಕ:09/05/2003.

**ಪ್ರಸ್ತಾವನೆ:–**

ಮೇಲೆ (1) ಮತ್ತು (2) ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ ಸರ್ಕಾರಿ ಸಂಯುಕ್ತ ಪದವಿ ಪೂರ್ವ ಕಾಲೇಜುಗಳಲ್ಲಿನ ಪ್ರಾಂಶುಪಾಲರುಗಳು / ಉಪ ಪ್ರಾಂಶುಪಾಲರುಗಳು ನಿರ್ವಹಿಸಬೇಕಾದ ಕರ್ತವ್ಯ ಮತ್ತು ಅಧಿಕಾರಗಳ ಕಾರ್ಯಸೂಚಿಯನ್ನು ಹೊರಡಿಸಲಾಗಿತ್ತು. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರು ಮೇಲೆ (3) ರಲ್ಲಿ ಓದಲಾದ ಪ್ರಸ್ತಾವನೆಯಲ್ಲಿ ಪ್ರೌಢ ಶಾಲೆ / ಪದವಿ ಪೂರ್ವ ಕಾಲೇಜಿನ ಕಾರ್ಯಹಂಚಿಕೆ ಸುಗಮಗೊಳಿಸುವ ದೃಷ್ಟಿಯಿಂದ ಮೇಲೆ ಓದಲಾದ (1) ಮತ್ತು (2) ರಲ್ಲಿ ಸಂಯುಕ್ತ ಪದವಿ ಪೂರ್ವ ಕಾಲೇಜುಗಳ ಪ್ರಾಂಶುಪಾಲರು / ಉಪ ಪ್ರಾಂಶುಪಾಲರುಗಳ ಕಾರ್ಯ ಹಂಚಿಕೆ ಬಗ್ಗೆ ಪರಿಷ್ಕರಿಸುವಂತೆ ಪ್ರಸ್ತಾಪಿಸಿರುತ್ತಾರೆ.

ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಸಂಯುಕ್ತ ಪದವಿ ಪೂರ್ವ ಕಾಲೇಜುಗಳ ಪ್ರಾಂಶುಪಾಲರ / ಉಪ ಪ್ರಾಂಶುಪಾಲರ ಕಾರ್ಯ ಹಂಚಿಕೆ ಬಗ್ಗೆ ದಿನಾಂಕ:18/07/2006 ರಂದು ಸಭೆ ಜರುಗಿಸಿ, ಈ ಹಿಂದೆ ಹೊರಡಿಸಿದ ಆದೇಶಗಳನ್ನು ರದ್ದುಗೊಳಿಸಿ ಮಾರ್ಪಡಿಸಿ ಅನುಬಂಧದಲ್ಲಿರುವಂತೆ ಸಂಯುಕ್ತ ಪದವಿ ಪೂರ್ವ ಕಾಲೇಜುಗಳಲ್ಲಿ ಪ್ರಾಂಶುಪಾಲರ / ಉಪ ಪ್ರಾಂಶುಪಾಲರ ಕಾರ್ಯ ಹಂಚಿಕೆಯನ್ನು ಸೂಚಿಸಲು ನಿರ್ಧರಿಸಲಾಗಿದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 92 ಡಿಪಿಐ 2006, ದಿನಾಂಕ: 16ನೇ ಸೆಪ್ಟೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ, ಸಂಯುಕ್ತ ಪದವಿ ಪೂರ್ವ ಕಾಲೇಜುಗಳ ಪ್ರಾಂಶುಪಾಲರ / ಉಪ ಪ್ರಾಂಶುಪಾಲರ ಕಾರ್ಯ ಹಂಚಿಕೆಯನ್ನು ಅನುಬಂಧದಲ್ಲಿ ಇರುವಂತೆ ಮಾರ್ಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸ್ವರ್ಣಲತಾ.ಎಂ.ಭಂಡಾರೆ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು–1,2)

**ಸರ್ಕಾರದ ಆದೇಶ ಸಂಖ್ಯೆ: ಇಡಿ 92 ಡಿಪಿಐ 2006, ದಿನಾಂಕ :16/09/2006 ರ ಅನುಬಂಧ**

**ಪದವಿ ಪೂರ್ವ ಕಾಲೇಜಿನ ಪ್ರಾಂಶುಪಾಲರ ಕಾರ್ಯಸೂಚಿಗಳು / ಕರ್ತವ್ಯಗಳು:–**

**I) ಶೈಕ್ಷಣಿಕ**

i) ಪ್ರೌಢ ಶಾಲಾ ತರಗತಿಗಳ ಶೈಕ್ಷಣಿಕ ಪ್ರಗತಿ ಮತ್ತು ಎಸ್.ಎಸ್.ಎಲ್.ಸಿ ಪರೀಕ್ಷೆಗೆ ಪ್ರಾಂಶುಪಾಲರು – ಉಪ ಪ್ರಾಂಶುಪಾಲರಿಬ್ಬರೂ ಜವಾಬ್ದಾರರು. ಆದರೆ ಉಪ ಪ್ರಾಂಶುಪಾಲರೇ ಪ್ರಧಾನವಾಗಿ ಜವಾಬ್ದಾರರಾಗಿರುತ್ತಾರೆ. ಉಪ ಪ್ರಾಂಶುಪಾಲರಿಲ್ಲದಿದ್ದಲ್ಲಿ ಪ್ರಾಂಶುಪಾಲರು ಪೂರ್ಣ ಜವಾಬ್ದಾರರು.

ii) ಪ್ರಾಂಶುಪಾಲರು, ಪ್ರೌಢ ಶಾಲಾ ಶಿಕ್ಷಣಕ್ಕೆ ಸಂಬಂಧಿಸಿದ ವಿಚಾರದಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರು ಮತ್ತು ಜಿಲ್ಲಾ ಪಂಚಾಯತ್ ಸಿ.ಇ.ಓ ರವರಿಗೆ ಜವಾಬ್ದಾರರಾಗಿರುತ್ತಾರೆ.

iii) ಪದವಿ ಪೂರ್ವ ಕಾಲೇಜು ಮತ್ತು ವೃತ್ತಿ ಶಿಕ್ಷಣ ಕೋರ್ಸ್‌ಗಳು ಇರುವ ಕಡೆ ವೃತ್ತಿ ಶಿಕ್ಷಣಕ್ಕೆ ಸಂಬಂಧಿಸಿದಂತೆ ವಾರ್ಷಿಕ ಚಟುವಟಿಕೆಗಳ ಕ್ಯಾಲೆಂಡರ್ ತಯಾರಿಸುವುದು.

iv) ಪ್ರೌಢ ಶಾಲಾ ತರಗತಿಗಳು ಮತ್ತು ಕಾಲೇಜಿನ ಕ್ರೋಢೀಕೃತ ವೇಳಾಪಟ್ಟಿ ತಯಾರಿಸುವುದು. ಸಾಂಸ್ಕೃತಿಕ ಚಟುವಟಿಕೆಗಳನ್ನು ಪ್ರಕಟಿಸುವುದು. ವಾರ್ಷಿಕೋತ್ಸವ ಕಾಲೇಜು ಮುರವಣಿ ಪಠ್ಯೇತರ ಚಟುವಟಿಕೆಗಳ ಉಸ್ತುವಾರಿ ಇತ್ಯಾದಿ.

v) ಉಪನ್ಯಾಸಕರ ದಿನಚರಿ ಪರಿಶೀಲನೆ.

vi) ಪದವಿ ಪೂರ್ವ ಕಾಲೇಜು ವಿಭಾಗದ ಶುರು ಪರೀಕ್ಷೆ, ಮಧ್ಯ ಪರೀಕ್ಷೆ ಮತ್ತು ವಾರ್ಷಿಕ ಪರೀಕ್ಷೆಗಳನ್ನು ಸಿಬ್ಬಂದಿ ಸಮಿತಿಯ ಸಹಕಾರದೊಂದಿಗೆ ನಡೆಸಿ ಫಲಿತಾಂಶ ಪ್ರಕಟಿಸುವುದು.

vii) ವಿದ್ಯಾರ್ಥಿಗಳ ಹಾಜರಾತಿ ಕ್ರೋಢೀಕರಣ.

viii) ಒಂದು ವಾರದಲ್ಲಿ 6 ಗಂಟೆಗಳ ಬೋಧನೆ.

ix) ಪ್ರೌಢ ಶಾಲಾ ವಿಭಾಗದ ಶೈಕ್ಷಣಿಕ ಮೇಲ್ವಿಚಾರಣೆ

x) ಉಪ ಪ್ರಾಂಶುಪಾಲರ ಹುದ್ದೆ ಇಲ್ಲದ ಕಡೆ ಪ್ರೌಢ ಶಾಲಾ ವಿಭಾಗದ ಹಿರಿಯ ಸಹ ಶಿಕ್ಷಕರು ಪ್ರಾಂಶುಪಾಲರ ಮೇಲ್ವಿಚಾರಣೆಯಲ್ಲಿ ಮತ್ತು ಅವರ ಆಡಳಿತ ನಿಯಂತ್ರಣದಲ್ಲಿ ನಿರ್ವಹಿಸಬೇಕಾದ ಕಾರ್ಯಗಳನ್ನು ಸರ್ಕಾರದ ಆದೇಶ ಸಂಖ್ಯೆ:ಇಡಿ 57 ಎಸ್‌ಎಲ್‌ಬಿ 2003, ದಿನಾಂಕ:03/12/2004 ರಲ್ಲಿಯ ಪಟ್ಟಿಯಲ್ಲಿ ತಿಳಿಸಿರುವಂತೆ ಪಟ್ಟಿ ಮಾಡಲಾಗಿದೆ.

xi) ಪ್ರೌಢ ಶಾಲಾ ವಿಭಾಗದ ವಿದ್ಯಾರ್ಥಿಗಳ ಕಲಿಕಾ ಪ್ರಗತಿ, ಎಸ್.ಎಸ್.ಎಲ್.ಸಿ ಫಲಿತಾಂಶಗಳಿಗೆ ಮೇಲ್ವಿಚಾರಕರಾದ ಪ್ರಾಂಶುಪಾಲರು ಮತ್ತು ಜವಾಬ್ದಾರಿ ಹೊಂದಿರುವ ಹಿರಿಯ ಸಹ ಶಿಕ್ಷಕರು ಜಂಟಿಯಾಗಿ ಜವಾಬ್ದಾರರು ಎಂದು ಹೇಳಲಾಗಿದೆ. ಆದರೆ ಪ್ರಾಂಶುಪಾಲರೇ ಪ್ರಧಾನವಾಗಿ ಜವಾಬ್ದಾರರಾಗಿರುತ್ತಾರೆ.

**II) ಆಡಳಿತಾತ್ಮಕ**

i) ಪ್ರೌಢ ಶಾಲಾ ಮತ್ತು ಪದವಿ ಪೂರ್ವ ವಿಭಾಗಕ್ಕೆ ಸೇರಿದ ಒಟ್ಟು ಕಟ್ಟಡ, ಪೀಠೋಪಕರಣ, ಪ್ರಯೋಗಾಲಯ ಮುಂತಾದ ಆಸ್ತಿಗಳನ್ನು ಪ್ರಾಂಶುಪಾಲರ ಜವಾಬ್ದಾರಿಗೆ ವಹಿಸುವುದು. ಈ ಸೌಲಭ್ಯಗಳನ್ನು ಪ್ರೌಢ ಶಾಲಾ ಮತ್ತು ಪದವಿ ಪೂರ್ವ ವಿದ್ಯಾರ್ಥಿಗಳ ಪಠ್ಯ ಕ್ರಮಗಳಿಗನುಗುಣವಾಗಿ ಅಗತ್ಯಕ್ಕೆ ತಕ್ಕಂತೆ ಉಪಯೋಗಿಸಿಕೊಳ್ಳುವುದು.

ii) ಉಪ ಪ್ರಾಂಶುಪಾಲರ ವಾರ್ಷಿಕ ಕಾರ್ಯ ನಿರ್ವಹಣಾ ವರದಿಗಳನ್ನು ವರದಿ ನೀಡುವ ಪ್ರಾಧಿಕಾರ ಪ್ರಾಂಶುಪಾಲರಾಗಿರುತ್ತಾರೆ.

iii) ಪ್ರಾಂಶುಪಾಲರು ಮತ್ತು ಉಪ ಪ್ರಾಂಶುಪಾಲರ ಕಾರ್ಯಭಾರದ ಹಂಚಿಕೆಗೆ ಸಂಬಂಧಿಸಿದಂತೆ ಜವಾಬ್ದಾರಿಗಳ ನಿರ್ವಹಣೆಯಲ್ಲಿ ವಿವಾದಗಳು ಉಂಟಾದಾಗ ಅವುಗಳನ್ನು ಇತ್ಯರ್ಥಪಡಿಸಲು ಸಂಬಂಧಪಟ್ಟ ಸಿ.ಇ.ಓ ರವರು ಸಕ್ಷಮ ಪ್ರಾಧಿಕಾರಿ ಆಗಿರುತ್ತಾರೆ.

iv) ಸಂಯುಕ್ತ ಪದವಿ ಪೂರ್ವ ಕಾಲೇಜುಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಕಡಿಮೆ ಆದಂತಹ ಸಂದರ್ಭದಲ್ಲಿ ಪ್ರಾಂಶುಪಾಲರು ಉಪ ಪ್ರಾಂಶುಪಾಲರ ಹುದ್ದೆಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡುವುದು.

v) ಸಂಯುಕ್ತ ಪದವಿ ಪೂರ್ವ ಕಾಲೇಜುಗಳಲ್ಲಿ ಕಾಲೇಜು ಅಭಿವೃದ್ಧಿ ಸಮಿತಿಯ ಕಾರ್ಯದರ್ಶಿಯಾಗಿ ಪ್ರಾಂಶುಪಾಲರೇ ಆಗಿರುತ್ತಾರೆ.

vi) ಉಪನ್ಯಾಸಕರು, ಉಪ ಪ್ರಾಂಶುಪಾಲರು ಮತ್ತು ಕಾಲೇಜು ವಿಭಾಗದ ಸಿಬ್ಬಂದಿಯವರಿಗೆ ಸಾಂದರ್ಭಿಕ ಮತ್ತು ಇತರೆ ರಜೆ ಮಂಜೂರು ಮಾಡುವ ಪ್ರಾಧಿಕಾರ ಪ್ರಾಂಶುಪಾಲರು ಹಾಗೂ ಇವರ ಕಾಲಮಿತಿ ವೇತನದ ಪ್ರಸ್ತಾವನೆಗಳನ್ನು ಸಲ್ಲಿಸುವುದು.

vii) ಉಪನ್ಯಾಸಕರು, ಉಪ ಪ್ರಾಂಶುಪಾಲರು, ಶಿಕ್ಷಕರು ಮತ್ತು ಇತರೆ ಕಾಲೇಜು ಹಾಗೂ ಪದವಿ ಪೂರ್ವ ವಿಭಾಗದ ಸಿಬ್ಬಂದಿಯವರ ಕಾಲಮಿತಿ ಬಡ್ತಿ / ಸ್ವಯಂಚಾಲಿತ ಬಡ್ತಿ ಪ್ರಸ್ತಾವನೆಗಳನ್ನು ಸಲ್ಲಿಸುವುದು.

viii) ಪದವಿ ಪೂರ್ವ ಕಾಲೇಜು ವಿಭಾಗದ ಮೇಲಧಿಕಾರಿಗಳಿಗೆ ಕಾಲಕಾಲಕ್ಕೆ ದಾಖಲೆ / ಅಂಕಿ ಅಂಶಗಳನ್ನು ಸಲ್ಲಿಸುವುದು.'

ix) ಪದವಿ ಪೂರ್ವ ಕಾಲೇಜು ವಿಭಾಗದ ವಿದ್ಯಾರ್ಥಿಗಳಿಗೆ ವರ್ಗಾವಣಾ ಪತ್ರಗಳನ್ನು ವಿತರಿಸುವುದು.

x) ಪ್ರೌಢ ಹಾಗೂ ಪದವಿ ಪೂರ್ವ ವಿಭಾಗಗಳ ವಿದ್ಯಾರ್ಥಿಗಳ ವೈದ್ಯಕೀಯ ತಪಾಸಣೆ.

xi) ಉಪನ್ಯಾಸಕರು, ಉಪ ಪ್ರಾಂಶುಪಾಲರು ಮತ್ತು ಕಛೇರಿ ಸಿಬ್ಬಂದಿ ವರ್ಗದವರ ರಹಸ್ಯ ವರದಿಗಳನ್ನು ಮತ್ತು ಆಸ್ತಿ – ಋಣ ಪಟ್ಟಿಗಳನ್ನು ಸಲ್ಲಿಸುವುದು.

xii) ಪದವಿ ಪೂರ್ವ ಕಾಲೇಜು ಹಾಗೂ ಪ್ರೌಢ ಶಾಲಾ ವಿಭಾಗದ ಉಪನ್ಯಾಸಕರ, ಶಿಕ್ಷಕರ ಹಾಗೂ ಇತರ ಸಿಬ್ಬಂದಿಗಳ ಸೇವಾ ಪುಸ್ತಕಗಳ ವಾರ್ಷಿಕ ಪರಿಶೀಲನೆ.

xiii) ಕಾಲೇಜಿಗೆ ಹಾಗೂ ಪ್ರೌಢ ಶಾಲೆಗೆ ಅವಶ್ಯವಿರುವ ನಿಯತಕಾಲಿಕೆಗಳನ್ನು, ಗ್ರಂಥಗಳನ್ನು, ಕ್ರೀಡಾ ಸಾಮಗ್ರಿ ಮುಂತಾದವುಗಳನ್ನು ನಿಯಮಾನುಸಾರ ಖರೀದಿಸುವುದು.

xiv) ಪ್ರೌಢ ಶಾಲಾ ವಿಭಾಗದ ಉಸ್ತುವಾರಿ ಹಿರಿಯ ಸಹ ಶಿಕ್ಷಕರದ್ದಾದರೂ ಇವರು ಪ್ರಾಂಶುಪಾಲರ ನಿಯಂತ್ರಣದಲ್ಲಿ ಕಾರ್ಯ ನಿರ್ವಹಿಸಬೇಕು.

**III) ಆರ್ಥಿಕ**

i) ಪ್ರೌಢ ಶಾಲಾ ವಿಭಾಗದ ವೇತನ ಡ್ರಾ ಮತ್ತು ಇತರೆ ಹಣಕಾಸಿನ ನಿರ್ವಹಣೆ ಅಧಿಕಾರ ಮತ್ತು ಜವಾಬ್ದಾರಿಯು ಪ್ರೌಢ ಶಾಲಾ ವಿಭಾಗದ ಹಿರಿಯ ಶಿಕ್ಷಕರೊಬ್ಬರು ನಿರ್ವಹಿಸುವ ವ್ಯವಸ್ಥೆ ಇದ್ದು, ಇದನ್ನು ಮಾರ್ಪಡಿಸಿ, ಸಂಪೂರ್ಣ ಅಧಿಕಾರವನ್ನು ಪ್ರಾಂಶುಪಾಲರಿಗೆ ನೀಡಲಾಗಿದೆ.

ii) ಪ್ರೌಢ ಶಾಲಾ ವಿಭಾಗದ ಆಯವ್ಯಯ ವೇತನ, ಸಾದಿಲ್ವಾರು ಇತ್ಯಾದಿಗಳನ್ನು ಪ್ರತ್ಯೇಕ ಲೆಕ್ಕ ಶೀರ್ಷಿಕೆಯಡಿಯಲ್ಲಿ ಜಿಲ್ಲಾ ಪಂಚಾಯತ್ ನಿಧಿಯಿಂದ ಭರಿಸಲಾಗುತ್ತಿದೆ. ಪದವಿ ಪೂರ್ವ ವಿಭಾಗದ ವೇತನ / ಸಾದಿಲ್ವಾರನ್ನು ಪ್ರತ್ಯೇಕವಾಗಿ ಸರ್ಕಾರದ ಲೆಕ್ಕ ಶೀರ್ಷಿಕೆಯಡಿಯಲ್ಲಿ ನಿರ್ವಹಿಸಲಾಗುತ್ತಿದೆ.

iii) ಈ ಎರಡೂ ಲೆಕ್ಕ ಶೀರ್ಷಿಕೆಗಳಡಿ ಪ್ರತ್ಯೇಕ ಬಿಲ್‌ಗಳನ್ನು ತಯಾರಿಸಿ ಪ್ರತ್ಯೇಕ ಲೆಕ್ಕ ಪತ್ರ ನಿರ್ವಹಿಸುವ ಅಧಿಕಾರವನ್ನು ಪ್ರಾಂಶುಪಾಲರಿಗೆ ನೀಡಲಾಗಿದೆ.

iv) ಪದವಿ ಪೂರ್ವ ಹಾಗೂ ಪ್ರೌಢ ವಿಭಾಗಕ್ಕೆ ಸಂಬಂಧಿಸಿದ ಸರ್ಕಾರಿ ಮತ್ತು ಸರ್ಕಾರೇತರ ನಗದು ಪುಸ್ತಕ ಮತ್ತಿತರ ವಹಿಗಳ ಜವಾಬ್ದಾರಿ.

v) ಪದವಿ ಪೂರ್ವ ಕಾಲೇಜು ಹಾಗೂ ಪ್ರೌಢ ಶಾಲಾ ವಿಭಾಗಗಳ ವೇತನ ಬಿಲ್ಲು, ಸಾದಿಲ್ವಾರು ಬಿಲ್ಲು ಮತ್ತಿತರೆ ಬಿಲ್ಲುಗಳನ್ನು ಡ್ರಾ ಮಾಡುವುದು.

vi) ಎರಡೂ ವಿಭಾಗಗಳ ಆದಾಯ ತೆರಿಗೆ ಕಟಾವಣೆ ಮತ್ತು ತಖ್ತೆ ತಯಾರಿಸುವುದು.

vii) ಎರಡೂ ವಿಭಾಗಗಳ ವಿದ್ಯಾರ್ಥಿ ವೇತನ ವಿತರಿಸುವುದು.

viii) ಹಿರಿಯ ಸಹ ಶಿಕ್ಷಕರು / ಪ್ರೌಢ ಶಾಲಾ ವಿಭಾಗದ ಎಲ್ಲಾ ಶೈಕ್ಷಣಿಕ ಕಾರ್ಯಗಳನ್ನು ಪ್ರಾಂಶುಪಾಲರ ನಿಯಂತ್ರಣದಲ್ಲಿ ನಿರ್ವಹಿಸಲಾಗುವುದು.

**IV) ಇತರೆ:–**

i) ಸಂಯುಕ್ತ ಪದವಿ ಪೂರ್ವ ಕಾಲೇಜು ಸಂಪೂರ್ಣವಾಗಿ ಕಾಲೇಜಿನ ಪ್ರಾಂಶುಪಾಲರ ಆಡಳಿತ ವ್ಯಾಪ್ತಿಗೆ ಒಳಪಡುವುದರಿಂದ ಸಂಸ್ಥೆಯ ಪ್ರೌಢ ಶಾಲಾ ಕಾಲೇಜು ಮತ್ತು ವೃತ್ತಿ ಶಿಕ್ಷಣ ವಿಭಾಗಗಳ ಕಾರ್ಯ ಚಟುವಟಿಕೆಗಳನ್ನು ಸಮನ್ವಯಗೊಳಿಸಿ ಸುಸೂತ್ರವಾಗಿ ನಡೆಯುವಂತೆ ಕಾರ್ಯ ನಿರ್ವಹಿಸುವುದು.

ii) ಸಂಯುಕ್ತ ಪದವಿ ಪೂರ್ವ ಕಾಲೇಜಿನ ಪ್ರಯೋಗಾಲಯ, ಗ್ರಂಥಾಲಯಗಳು ಪ್ರಾಂಶುಪಾಲರ ನಿಯಂತ್ರಣದಲ್ಲಿರುತ್ತವೆ. ಈ ಸೌಲಭ್ಯಗಳು ಪ್ರೌಢ ಶಾಲಾ ವಿಭಾಗಕ್ಕೂ ದೊರೆಯುವಂತೆ ವ್ಯವಸ್ಥೆ ಮಾಡಬೇಕು.

iii) ಸಂಸ್ಥೆಯ ಪೀಠೋಪಕರಣಗಳು, ಕಟ್ಟಡ ಮತ್ತು ಆಟದ ಮೈದಾನದ ಜವಾಬ್ದಾರಿ ಪ್ರಾಂಶುಪಾಲರದ್ದು. ಪ್ರೌಢ ಶಾಲಾ ವಿಭಾಗಕ್ಕೆ ಅದರ ಪೂರ್ಣ ಪ್ರಯೋಜನೆ ದೊರೆಯುವಂತೆ ಮಾಡಬೇಕು.

iv) ಪದವಿ ಪೂರ್ವ ಹಾಗೂ ಪ್ರೌಢ ವಿಭಾಗದ ಕಾರ್ಯಾಲಯದ ಸಿಬ್ಬಂದಿ / ಗ್ರೂಪ್–ಡಿ ನೌಕರರಿಗೆ ಕಾರ್ಯ ತುಂಬುವುದು.

v) ಪ್ರಾಚಾರ್ಯರು ರಜೆ ಅಥವಾ ಅನ್ಯ ಕಾರ್ಯ ನಿಮಿತ್ತವಿರುವಾಗ ಉಪ ಪ್ರಾಂಶುಪಾಲರಿಗೆ ಚಾರ್ಜ್ ವಹಿಸುವುದು. ಉಪ ಪ್ರಾಂಶುಪಾಲರು ಇಲ್ಲದಿದ್ದ ಪಕ್ಷದಲ್ಲಿ ಹಿರಿಯ ಉಪನ್ಯಾಸಕರಿಗೆ ಚಾರ್ಜ್ ವಹಿಸುವುದು.

vi) ಪ್ರೌಢ ಶಾಲಾ ವಿಭಾಗಕ್ಕೆ ಸಂಬಂಧಿಸಿದಂತೆ ದಾಸ್ತಾನುವಹಿ / ಸ್ಥಿರಾಸ್ತಿ / ಚರಾಸ್ತಿಗಳನ್ನು ಪ್ರಾಂಶುಪಾಲರೇ ನಿರ್ವಹಿಸುವುದು. ಕಟ್ಟಡ ಸ್ವಾಮಿತ್ವವನ್ನು ಪ್ರಾಂಶುಪಾಲರು ನಿರ್ವಹಿಸುವುದು.

vii) ತಮ್ಮ ವಿವೇಚನೆಗೆ ಒಳಪಟ್ಟು ಪ್ರಾಂಶುಪಾಲರು ನಿಗಧಿಪಡಿಸಿದ ದೈನಂದಿನ ಕಾರ್ಯಭಾರವನ್ನು ಉಪ ಪ್ರಾಂಶುಪಾಲರಿಗೆ ವಹಿಸಬಹುದು.

viii) ಉಪ ಪ್ರಾಂಶುಪಾಲರು ಇಲ್ಲದ ಕಡೆ ಪ್ರೌಢ ಶಾಲಾ ವಿಭಾಗದ ಶೈಕ್ಷಣಿಕ ಉಸ್ತುವಾರಿಯನ್ನು ಹಿರಿಯ ಸಹ ಶಿಕ್ಷಕರು ಪ್ರಾಂಶುಪಾಲರ ನಿಯಂತ್ರಣದಲ್ಲಿ ನಿರ್ವಹಿಸಬೇಕು.

**ಪದವಿ ಪೂರ್ವ ಕಾಲೇಜಿನ ಉಪ ಪ್ರಾಂಶುಪಾಲರ ಕಾರ್ಯಸೂಚಿಗಳು / ಕರ್ತವ್ಯಗಳು:–**

**I) ಶೈಕ್ಷಣಿಕ**

i) ಸಂಯುಕ್ತ ಪದವಿ ಪೂರ್ವ ಕಾಲೇಜುಗಳಲ್ಲಿ ಪ್ರೌಢ ಶಾಲಾ ವಿಭಾಗದ ತರಗತಿಗಳ ಶೈಕ್ಷಣಿಕ ಪ್ರಗತಿ ಮತ್ತು ಎಸ್.ಎಸ್.ಎಲ್.ಸಿ ಪರೀಕ್ಷಾ ಫಲಿತಾಂಶಗಳಿಗೆ ಇಬ್ಬರೂ ಜವಾಬ್ದಾರರು. ಉಪ ಪ್ರಾಂಶುಪಾಲರು ಇಲ್ಲದ ಕಡೆ ಪ್ರಾಂಶುಪಾಲರೇ ಜವಾಬ್ದಾರರು.

ii) ಪ್ರಾಂಶುಪಾಲರೊಂದಿಗೆ ಸಮಾಲೋಚನೆ ಪ್ರೌಢ ಶಾಲಾ ವಿಭಾಗದ ವಾರ್ಷಿಕ ಚಟುವಟಿಕೆಗಳು ಕ್ಯಾಲೆಂಡರ್ ತಯಾರಿಸುವುದು, ತರಗತಿವಾರು ಶಾಲಾ ಕ್ರೋಢೀಕೃತ ವೇಳಾಪಟ್ಟಿ ತಯಾರಿಕೆ, ದೈಹಿಕ ಶಿಕ್ಷಣ ಕಾರ್ಯಕ್ರಮಗಳು ಸಾಂಸ್ಕೃತಿಕ ಚಟುವಟಿಕೆಗಳ ಉಸ್ತುವಾರಿ, ಶೈಕ್ಷಣಿಕ ಪ್ರವಾಸ, ಶಾಲಾ ವಾರ್ಷಿಕೋತ್ಸವ.

iii) ಪ್ರೌಢ ಶಾಲಾ ವಿಭಾಗದ ಸಹ ಶಿಕ್ಷಕರ, ವಿಶೇಷ ಶಿಕ್ಷಕರ ತರಗತಿ ಬೋಧನೆಯ ವೀಕ್ಷಣೆ. ಗೃಹ ಕಾರ್ಯದ ವೀಕ್ಷಣೆ, ಶಿಕ್ಷಕರ ಪಾಠಗಳ ಟಿಪ್ಪಣಿ, ತರಗತಿ ಹಾಜರಾತಿ ಉಸ್ತುವಾರಿ.

iv) ಪ್ರೌಢ ಶಾಲಾ ವಿಭಾಗಕ್ಕೆ ಕಿರು ಪರೀಕ್ಷೆ, ಮಧ್ಯಮ ಪರೀಕ್ಷೆ ಮತ್ತು ವಾರ್ಷಿಕ ಪರೀಕ್ಷೆಗಳನ್ನು ನಡೆಸುವುದು. ಫಲಿತಾಂಶ ಪ್ರಕಟಣೆ, ಕ್ರೋಢೀಕೃತ ಅಂಶವಹಿ ನಿರ್ವಹಿಸುವುದು.

v) ಪ್ರೌಢ ಶಾಲಾ ವಿಭಾಗದ ದೈನಂದಿನ ಪ್ರಾರ್ಥನೆ, ಸ್ವಚ್ಛತೆ, ಸಾಮೂಹಿಕ ಕವಾಯತು ಇತ್ಯಾದಿ ಉಸ್ತುವಾರಿ.

vi) ವಾರದಲ್ಲಿ ಕನಿಷ್ಠ 10 ಅವಧಿಗಳ ಬೋಧನೆ.

vii) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯಿಂದ ನಡೆಸಿದ ಎಲ್ಲಾ ಪರೀಕ್ಷೆಗಳ ಉಸ್ತುವಾರಿ ಹಾಗೂ ಫಲಿತಾಂಶಕ್ಕೆ ಪ್ರಧಾನ ಜವಾಬ್ದಾರರು.

vii) ಉಪ ಪ್ರಾಂಶುಪಾಲರು ಇಲ್ಲದ ಕಡೆ ಪ್ರೌಢ ಶಾಲಾ ವಿಭಾಗದ ಶೈಕ್ಷಣಿಕ ಉಸ್ತುವಾರಿಯನ್ನು ಪ್ರಾಂಶುಪಾಲರ ನಿಯಂತ್ರಣದಲ್ಲಿ ಹಿರಿಯ ಸಹ ಶಿಕ್ಷಕರು ನಿರ್ವಹಿಸಬೇಕು.

**II) ಆಡಳಿತಾತ್ಮಕ**

i) ಸಂಯುಕ್ತ ಪದವಿ ಪೂರ್ವ ಕಾಲೇಜು ಅಭಿವೃದ್ಧಿ ಸಮಿತಿಯ ಕಾರ್ಯ ಕಲಾಪಗಳಲ್ಲಿ ಸಕ್ರಿಯವಾಗಿ ಭಾಗವಹಿಸುವುದು.

ii) ಪ್ರೌಢ ಶಾಲಾ ವಿಭಾಗದಿಂದ ಮೇಲಧಿಕಾರಿಗಳಿಗೆ ಕಾಲಕಾಲಕ್ಕೆ ಸಲ್ಲಿಸಬೇಕಾದ ದಾಖಲೆಗಳನ್ನು ಅಂಕಿ ಅಂಶಗಳನ್ನು ಸಲ್ಲಿಸುವುದು.

ji) ಸಹ ಶಿಕ್ಷಕರ ರಹಸ್ಯ ವರದಿಗಳನ್ನು ವರದಿ ಮಾಡುವುದು ಮತ್ತು ಸಲ್ಲಿಸುವುದು, ಆಸ್ತಿ–ಋಣ ಪಟ್ಟಿಗಳ ನಿರ್ವಹಣೆ.

iv) ಸಹ ಶಿಕ್ಷಕರಿಗೆ ಸಾಂದರ್ಭಿಕ ರಜೆ ಮಂಜೂರಾತಿ.

v) 8 ರಿಂದ 10 ನೇ ತರಗತಿಯವರಿಗೆ ಎಲ್ಲಾ ವಿದ್ಯಾರ್ಥಿಗಳ ಹಾಜರಾತಿ, ಪ್ರವೇಶಕ್ಕೆ ಸಂಬಂಧಿಸಿದ ಪ್ರಕ್ರಿಯೆ, ವರ್ಗಾವಣೆ ಪ್ರಮಾಣ ಪತ್ರ, ದಾಖಲಾತಿವಹಿ, ಶಾಲಾ ಶುಲ್ಕ ವಸೂಲಾತಿ, ರಜೆ ಮಂಜೂರಾತಿ, ಸೇವಾ ಪುಸ್ತಕಗಳ

ನಿರ್ವಹಣೆ, ರಹಸ್ಯ ವರದಿಗಳ ನಿರ್ವಹಣೆ ಹಾಗೂ ಪ್ರೌಢ ಶಾಲಾ ವಿಭಾಗಕ್ಕೆ ಸಂಬಂಧಿಸಿದ ನಗದು ಪುಸ್ತಕಗಳ ನಿರ್ವಹಣೆ, ಉಪ ಪ್ರಾಂಶುಪಾಲರೇ ಮಾಡತಕ್ಕದ್ದು.

vi) ವಾಚನಾಲಯದ ಪುಸ್ತಕಗಳು, ವಾಚನಾಲಯ ಪ್ರಯೋಗ ಶಾಲೆಯನ್ನು ಪೂರ್ಣವಾಗಿ ಉಪಯೋಗಿಸಿಕೊಳ್ಳಲು ಅವಕಾಶ ಮಾಡಿಕೊಡುವುದು.

vii) ಪ್ರೌಢ ಶಾಲಾ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಗಳಲ್ಲಿ ಸದಸ್ಯ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುವುದು.

viii) ಉಪ ಪ್ರಾಂಶೂಪಾಲರು ಇಲ್ಲದ ಕಡೆ ಪ್ರೌಢ ಶಾಲಾ ವಿಭಾಗದ ಹಿರಿಯ ಸಹ ಶಿಕ್ಷಕರು, ಪ್ರೌಢ ಶಾಲಾ ವಿಭಾಗದ ಎಲ್ಲಾ ಕಾರ್ಯ / ಮೇಲುಸ್ತುವಾರಿಯನ್ನು ಪ್ರಾಂಶುಪಾಲರ ಮೇಲುಸ್ತುವಾರಿ ಮತ್ತು ನಿಯಂತ್ರಣದಲ್ಲಿ ನಿರ್ವಹಿಸತಕ್ಕದ್ದು.

**III) ಆರ್ಥಿಕ**

i) ಯಾವುದೇ ಅಧಿಕಾರ ನೀಡಿಲ್ಲ. ಸಂಪೂರ್ಣ ಆರ್ಥಿಕ ಅಧಿಕಾರ ಪ್ರಾಂಶುಪಾಲರಿಗೆ ನೀಡಲಾಗಿದೆ.

ii) ಪ್ರೌಢ ಶಾಲೆಗೆ ಸಂಬಂಧಿಸಿದ ಸಾದಿಲ್ವಾರು ವೆಚ್ಚ ಮಾಡುವುದು.

iii) ಪ್ರೌಢ ಶಾಲಾ ವಿಭಾಗದ ಆಯವ್ಯಯ ವೇತನ, ಸಂಬಂಧಿಸಿದ ಲೆಕ್ಕ ಪತ್ರಗಳ ನಿರ್ವಹಣೆ.

iv) ಉಪ ಪ್ರಾಂಶುಪಾಲರ ಹುದ್ದೆ ಇಲ್ಲದ ಕಡೆಗೆ ಪ್ರೌಢ ಶಾಲಾ ವಿಭಾಗದ ಹಿರಿಯ ಸಹ ಶಿಕ್ಷಕರು ಪ್ರಾಂಶುಪಾಲರ ನಿಯಂತ್ರಣ ಮತ್ತು ಮೇಲುಸ್ತುವಾರಿಯಲ್ಲಿ ಪ್ರೌಢ ಶಾಲಾ ವಿಭಾಗದ ಎಲ್ಲಾ ಕಾರ್ಯ ನಿರ್ವಹಿಸತಕ್ಕದ್ದು.

**IV) ಇತರೆ**

i) ಯಾವುದೇ ಅಧಿಕಾರ ನೀಡಿಲ್ಲ. ಸಂಪೂರ್ಣ ಅಧಿಕಾರ ಪ್ರಾಂಶುಪಾಲರಿಗೆ ನೀಡಲಾಗಿದೆ.

ii) ಸಂಯುಕ್ತ ಪದವಿ ಪೂರ್ವ ಕಾಲೇಜು ಸಂಪೂರ್ಣವಾಗಿ ಕಾಲೇಜಿನ ಪ್ರಾಂಶುಪಾಲರ ಆಡಳಿತ ವ್ಯಾಪ್ತಿಗೆ ಒಳಪಡುವುದರಿಂದ ಪ್ರೌಢ ಶಾಲಾ ಕಾಲೇಜು ಮತ್ತು ವೃತ್ತಿ ಶಿಕ್ಷಣ ವಿಭಾಗಗಳ ಕಾರ್ಯ ಚಟುವಟಿಕೆಗಳನ್ನು ಸಮನ್ವಯಗೊಳಿಸಿ ಸುಸ್ರೂಶವಾಗಿ ನಡೆಯುವಂತೆ ಪ್ರಾಂಶುಪಾಲರೊಂದಿಗೆ ಕಾರ್ಯ ನಿರ್ವಹಿಸುವುದು.

iii) ಪ್ರಾಂಶುಪಾಲರು ಒಪ್ಪಿಸಿದ ಯಾವುದೇ ಇತರೆ ಕಾರ್ಯ ಭಾರವನ್ನು ನಿರ್ವಹಿಸುವುದು.

iv) ಉಪ ಪ್ರಾಂಶುಪಾಲರ ಹುದ್ದೆ ಇಲ್ಲದ ಕಡೆ ಪ್ರೌಢ ಶಾಲಾ ವಿಭಾಗದ ಹಿರಿಯ ಸಹ ಶಿಕ್ಷಕರು ಪ್ರಾಂಶುಪಾಲರ ನಿಯಂತ್ರಣ ಮತ್ತು ಮೇಲುಸ್ತುವಾರಿಯಲ್ಲಿ ಪ್ರೌಢ ಶಾಲಾ ವಿಭಾಗದ ಎಲ್ಲಾ ಕಾರ್ಯ ನಿರ್ವಹಿಸತಕ್ಕದ್ದು.

**ಸ್ವರ್ಣಲತಾ.ಎಂ.ಭಂಡಾರೆ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು–1,2)

ಪಿ.ಆರ್. 1412

**FOREST, ECOLOGY AND ENVIRONMENT SECRETARIAT**

**Sub :** Diversion of 0.74 ha. forest land at Horiybbe under Forest (Conservation) Act 1980 for construction of 12 MW Mini Hydel Scheme in favour of M/s Shamili Hydel Power Project Pvt. Ltd. from the already diverted 129.60 ha. of forest land for Varahi Irrigation Project.

**Read :**
1. Letter No.A5(3)GFL.CR.5/06-07 dated 24-07-2006 of the Principal Chief Conservator of Forests, Bangalore.
2. State Government letter No.FEE 67 FLL 2006, dated :29.7.2006.
3. Letter No.F(C)A/11.3/98/KAR/IP1/928 dated 11-8-2006 of Government of India, Ministry of Environment and Forests, Regional Office, (South Zone), Bangalore
4. State Government letter No.FEE 67 FLL 2006, dated: 21-8-2006.
5. Letter No F(C)A/11.3/98/KAR/IP1/1085 dated 24-8-2006 of Government of India, Ministry of Environment and Forests, Regional Office, (South Zone), Bangalore.

**PREAMBLE:**

The Principal Chief Conservator of Forests, Bangalore vide his letter dated: 24-7-2004 read at (1) above has submitted the proposal under Chapter 2 para 2.1 (IV) of Forest (Conservation)Act, 1980 for re-diversion of 0.74 ha. of forest land in favour of M/s Shamili Hydel Power Projects Private Limited for construction of 12 MW Mini Hydel project in Horiyabbe, Siddapur Taluk, Kundapur Division. The proposed area falls under already diverted 129.60 ha. of forest land for Varahi Irrigation project in the name of Karnataka Neeravari Nigam Limited, Bangalore.

Accordingly, the proposal was recommended to Government of India, Ministry of Environment and Forests, Regional Office(Southern Zone), Bangalore vide State Government letter dated: 29-7-2006 read at (2) above. The user agency has agreed to abide by all the conditions in G.O. No. FEE 114

FGL 89 dt: 24-1-2005. However the condition No.16 of the said G.O. will be relaxed for the purpose of present re diversion of 0.74 ha.

The Government of India, Ministry of Environment and Forests, Bangalore vide their letter dated 11-8-2006 read at (3) above has given in Principle (Stage-I) approval for re-diversion of 0.74 ha. of forest land subject to fulfillment of certain conditions and the same was communicated to the Principal Chief Conservator of Forests, Bangalore for compliance.

The Principal Chief Conservator of Forests, Bangalore vide his letter dated: 21-8-2006 furnished his compliance report and the same has been sent to Government of India vide State Government letter dated: 21-8-2006 read at (4) above.

Finally, the Government of India Ministry of Environment and Forests, Regional Office, (Southern Zone), Bangalore vide their letter dated: 24-8-2006 read at (5) above has conveyed their approval (Stage-II) under Forest(Conservation)Act, 1980 for re-diversion of 0.74 ha. of forest land at Horiyabbe, Siddapur Taluk, Kundapur Division for construction of 12 MW Mini Hydel project in favour of M/s Shamili Hydel Power Projects Private Limited out of already diverted 129.60 ha. of forest land approved for Varahi Irrigation Project subject to certain conditions.

The proposal has been examined in detail and hence the order.

**Government Order No. FEE 67 FLL 2006, Bangalore, Dated: 28th August 2006**

In the circumstances explained in the preamble above, Government are pleased to accord approval under Forest (Conservation) Act 1980 for re-diversion of 0.74 ha. of forest land at Horiyabbe, Siddapur Taluk, Kundapur Division for construction of 12 MW Mini Hydel project in favour of M/s Shamili Hydel Power Projects Private Limited from the already diverted 129.60 ha. of forest land approved for Varahi Irrigation Project subject to the following conditions:

1. The legal status of forest land shall remain unchanged.
2. The funds received from the user agency towards NPV under the project shall be transferred to Ad-hoc Compensatory Afforestation Fund Management and Planning Authority (CAMPA) in Account No.C.A.1582 of Corporation Bank, Block-II, CGO Complex, Phase-I, Lodhi Road, New Delhi-110003.
3. The total forest area utilized for the project shall not exceed 0.74 ha.
4. The forest land shall not be used for any purpose other than that specified in the proposal.
5. The user agency has to pay the Net present value (NPV) fixed by Government vide Notification No. FEE 247 FGL 2002, dated: 17.1.2004.
6. The lessee has to pay the lease rent as fixed by Government from time to time.
7. The user agency shall abide by all the conditions imposed upon by Government of India, Government of Karnataka and Principal Chief Conservator of Forests.
8. Any other conditions to be stipulated by the Government of India/State Government /Principal Chief Conservator of Forests, Karnataka in the interest of conservation of forests.

By order and in the name of Governor of Karnataka

P.R. 1475

**P.R.KALAVATHI**

Under Secretary to Government,

Forest, Ecology and Environment Department.

**Sub :** Extension of period of diversion of 163.5 ha. of forest land and transfer of lease to M/s SESA Goa Limited, for renewal of manganese and iron ore Mining Lease in Neerthadi RF in Chitradurga District of Karnataka.

**Read :**

1. Letter No.A5(1).MNG.CR,37/84-85,dated 14.6.2006 of Principal Chief Conservator of Forests, Bangalore.
2. State Government letter No.FEE 77 FFM 2006, dated :05.07.2006.
3. Letter No. F.No. 8-81/92-FC, dated: 28th August 2006 of Asst.Inspector General of Forests, Government of India, Ministry of Environment and Forests (F.C.Division), Paryavaran Bhavan, CGO Complex, Lodhi Road, New Delhi-110 003.

**PREAMBLE:**

The Principal Chief Conservator of Forests, Bangalore vide his letter dated 14.06.2006 read at (1) above has sent a proposal to State Government for approval of Government of India under Section 2 of Forest (Conservation) Act 1980, for renewal of mining lease in favour of M/s Sesa Goa Limited (Unit A.Narrain Mines) for mining over an area of 163.50 ha.for iron and manganese ore in Neerthadi Reserved Forest of Holalkere Range, Chitradurga Division subject to certain conditions.

Accordingly, the proposal was recommended to Government of India, Ministry of Environment and Forests, New Delhi for approval vide State Government letter dated: 05.7.2006 read at (2) above

The Government of India, Ministry of Environment and Forests, Regional Office, (South Zone), Bangalore vide their letter dated: 28th August 2006 read at (3) above has conveyed their final approval for extension of the period of diversion of forest land with effect from 11.7.2006 upto 27.10.2012 making it co-terminus with the period of lease granted under MMRD Act subject to payment of the NPV of the diverted forest land. Approval of the Central Government is also granted for transfer of mining lease to M/s Sesa Goa Limited subject to the conditions that M/s Sesa Goa Limited shall abide by all the terms and conditions imposed by the Central Government.

The proposal has been examined in detail and hence the following order.

**Government Order NO. FEE 77 FFM 2006, Bangalore, Dated: 09th October 2006**

In the circumstances explained in the preamble above, Government are pleased to accord sanction under section (2) of Forest (Conservation) Act 1980 for extension of period of diversion of forest land with effect from 11.07.2006 upto 27.10.2012 in favour of M/s Sesa Goa Limited (Unit A.Narrain Mines) for mining over an area of 163.5 ha. in Neerthadi Reserved Forest of Holalkere Range, Chitradurga Division and approval of Government is accorded for transfer of mining lease to M/s Sesa Goa Limited subject to the following conditions:

1. The Legal status of forest land will remain unchanged.
2. Reclamation of mined area will be done at the cost of user agency.
3. Free fuel wood/alternate energy source will be provided to labourers working at project site.
4. Lease period shall be co-terminous with lease under the MMRD Act w.e.f. 11.07.2006 to 27.10.2012.
5. The project authority shall not be allowed to take up construction of any infrastructural facilities like building etc., on forestland.
6. The check dams shall be constructed by the project authority to arrest the flow of suspended solids. The project proponents shall provide for adequate arrangements for removing the accumulated material from behind these dams.
7. The quality of water finally discharged into the main water course from the tailing dam should confirm to the prescribed standard.
8. No waste material should be allowed to role down over the hill slopes (if any). The control measures for preventing the rolling down of debris over the hill slopes should be provided.
9. Mechanical and Biological reclamation of mined area shall be carried out by the Forest Department.
10. Effective steps for control of air pollution causing dust should be taken. No sorting and crushing facilities should be provided at the project site.
11. All the noise producing sources should be provided in-built control measures to reduce the noise level. The noise level should not exceed 40 dBA at a distance of 100m from the source.
12. No change of methodology of working and scope of working should be made without prior approval of the Ministry.

13. The user agency shall open a fuelwood depot at the project site for supply of free fuelwood to staff and labourers working in the project. The quantity of fuelwood to be supplied will be prescribed by the Conservator of Forests/Deputy Conservator of Forests concerned.

14. The Lessee/User agency shall pay to the Forest Department the lease rent and supervision charges at prevailing rates (subject to revision from time to time) per year per ha., without fail and shall abide by the orders issued by State Government Forest Department in this regard from time to time.

15. The Lessee shall carryout the rigid soil and water conservation measures as suggested by Forest Department.

16. The Lessee shall protect and nurture, the natural tree growth in the area, leased out for mining.

17. The Lessee shall, as long as the Lease is in force, pay the yearly rent regularly to Government, in advance, the first of such payments to be made on the day of signing the agreement and the subsequent annual payment on the corresponding day and month of the succeeding years. 18 and half percent interest will be levied on belated payments for the period of 90 days, thereafter a penal rate of interest at 22 and half percent shall be charged on the amount due.

18. The Lessee shall rigidly undertake protective measures in the leased area and area surrounding it up to one Km. against any fire incidents.

19. The Lessee shall not cut trees without prior permission of forest officers and all permitted feelings should be handed over to the Forest Department under cover of receipt. Transportation of ore should be strictly as per transit rules.

20. The Lessee shall abide by any other conditions laid down by Government of India/State Government Forest Department from time to time in respect of forest land lease.

21. Over burden will not be dumped on hill slope.

22. Effective Pollution control measures with respect to Air quality, Water quality should be implemented. Adequate treatment facilities, garland drains, check dams, etc should be installed to prevent water pollution by mine discharge water, surface run off etc.

23. Waste generated shall not be dumped into the forest area out side the leased area.

24. The Lessee shall not use the leased forest area for construction of any factories.

25. The Lessee should submit working plan/map for the entire leased area and area to be operated depending upon their convenience by phasing their programme of mining systematically keeping in view of the proposals submitted to Government of India for approval under the Forest (Conservation) Act of 1980.

26. All labourers connected to mining activity should have an identity card duly issued by the lessee, under intimation to the concerned Range Forest Officer and to the Deputy Conservator of Forests, Chitradurga.

27. The Lessee shall pay compensation to the workmen for any injury, death, disability etc caused or occurred during the time of execution of work under Workmen's Compensation Act or any Act in force from time to time. The Lessee is responsible for any commission/s and/or omissions of his workmen.

28. The Lessee shall abide by the provisions of all the laws for the time being in force relating to working of minerals and matters affecting safety, health and convenience of the lessee's employees or of the public doing execution of his (LESSEE) work.

